RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ಪತ್ರಿಕೆ**

| ಭಾಗ – *IV-A* | ಬೆಂಗಳೂರು, ಮಂಗಳವಾರ, ಡಿಸೆಂಬರ್ ೧೧, ೨೦೧೨ (ಮಾರ್ಗಶಿರ ೨೦, ಶಕ ವರ್ಷ ೧೯೩೪) | ನಂ. ೧೦೯೧ |
|---|---|---|

***KARNATAKA LEGISLATIVE ASSEMBLY SECRETARIAT***

***NOTIFICATION***

***No. KLA/LGA/44/Bill/2012, Bangalore, Dated: 11.12.2012***

The following Bill was introduced in Legislative Assembly on 11.12.2012.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹದಿನೈದನೇ ಅಧಿವೇಶನ**

**ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ (ಮೂರನೇ ತಿದ್ದುಪಡಿ) ವಿಧೇಯಕ, 2012**

**(2012ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 44)**

ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956 ಕ್ಕೆ ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡು ಬರುವ ಉದ್ದೇಶಗಳಿಗಾಗಿ ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956ನ್ನು (1957ರ ಕರ್ನಾಟಕ ಅಧಿನಿಯಮ 2) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ಮೂರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ (ಮೂರನೇ ತಿದ್ದುಪಡಿ) ಅಧಿನಿಯಮ, 2012 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 11ಎ ಪ್ರಕರಣದ ತಿದ್ದುಪಡಿ.–** ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956ರ (1957ರ ಕರ್ನಾಟಕ ಅಧಿನಿಯಮ 2) (ಇಲ್ಲಿ ಇನ್ನುಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 11ಎ ಪ್ರಕರಣದ (5)ನೇ ಉಪಪ್ರಕರಣದಲ್ಲಿನ (ii)ನೇ ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

> "(ii) ನಿಯಮಿಸಬಹುದಾದ ಅಂಥ ವಿಧಾನದಲ್ಲಿ ಮತ್ತು ಅಂಥ ಷರತ್ತುಗಳಿಗೆ ಒಳಪಟ್ಟು, ಭಾರತದಲ್ಲಿ ವಿಮಾನದ ಮೂಲಕ ಅಥವಾ ರೈಲ್ವೆಯ ಮೂಲಕ ಒಂದು ಅಥವಾ ಹೆಚ್ಚು ಪ್ರಯಾಣಗಳಿಗೆ ಆತನು ಒಬ್ಬನೇ ಆಗಲೀ ಅಥವಾ ಆತನ ಒಬ್ಬ ಜೊತೆಗಾರನೊಂದಿಗಾಗಲೀ, ಪ್ರಯಾಣ ಮಾಡುವ ಉದ್ದೇಶಕ್ಕಾಗಿ, ಏಪ್ರಿಲ್ ಮತ್ತು ಅಕ್ಟೋಬರ್ ತಿಂಗಳುಗಳಲ್ಲಿ ಎರಡು ಸಮಾನ ಕಂತುಗಳಲ್ಲಿ ಸಂದಾಯ ಮಾಡಬಹುದಾದ, ಒಂದು ವರ್ಷಕ್ಕೆ ಒಂದು ಲಕ್ಷ ರೂಪಾಯಿಗಳಿಗೆ ಅರ್ಹನಾಗಿರತಕ್ಕದ್ದು."

**3. 11ಬಿ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 11ಬಿ ಪ್ರಕರಣದ (1)ನೇ ಉಪಪ್ರಕರಣದಲ್ಲಿ "ದೊರೆಯತಕ್ಕ ನಿವೃತ್ತಿ ವೇತನದ" ಎಂಬ ಪದಗಳಿಗೆ "ಅರ್ಹನಾದ ನಿವೃತ್ತಿ ವೇತನದ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**4. 12ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 12ನೇ ಪ್ರಕರಣದ (ಎ) ಖಂಡದಲ್ಲಿ (iii) ನೇ ಉಪಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(iv) 11ಬಿ ಪ್ರಕರಣದ ಅಡಿಯಲ್ಲಿ ಕುಟುಂಬ ನಿವೃತ್ತಿವೇತನವನ್ನು ಪಡೆಯುತ್ತಿರುವ ಪ್ರತಿಯೊಬ್ಬ ವ್ಯಕ್ತಿಯು, ಸದರಿ ತಿಂಗಳ ಅವಧಿಯಲ್ಲಿ ವೈದ್ಯಕೀಯ ಮರುಸಂದಾಯ ಕ್ಲೇಮು ಯಾವುದಾದರೂ ಇದ್ದಲ್ಲಿ, ಅದರ ಮೂಲಕ ಈಗಾಗಲೇ ಮರುಸಂದಾಯವಾದ ಮೊತ್ತವನ್ನು ನಿಗದಿತ ವೈದ್ಯಕೀಯ ಭತ್ಯೆಯಿಂದ ಕಡಿತಗೊಳಿಸತಕ್ಕದ್ದು ಎಂಬ ಷರತ್ತಿಗೆ ಒಳಪಟ್ಟು, ಪ್ರತಿ ತಿಂಗಳಿಗೆ ಎರಡು ಸಾವಿರ ರೂಪಾಯಿಗಳ ನಿಗದಿತ ವೈದ್ಯಕೀಯ ಭತ್ಯೆಗೆ ಅರ್ಹನಾಗತಕ್ಕದ್ದು."

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ನಿವೃತ್ತಿ ವೇತನವನ್ನು ಸ್ವೀಕರಿಸುತ್ತಿರುವ ಮಾಜಿ ಸದಸ್ಯರುಗಳಿಗೆ ಪ್ರತಿ ವರ್ಷಕ್ಕೆ ಗರಿಷ್ಠ ಒಂದು ಲಕ್ಷ ರೂಪಾಯಿಗಳಿಗೆ ಒಳಪಟ್ಟು ಭಾರತದಲ್ಲಿ ವಿಮಾನದ ಅಥವಾ ರೈಲಿನ ಮೂಲಕ ವಾಸ್ತವಿಕ ಪ್ರಯಾಣ ವೆಚ್ಚಗಳ ಮರು ಪಾವತಿಗೆ ಮತ್ತು ಮಾಜಿ ಸದಸ್ಯರ ಕುಟುಂಬದ ಸದಸ್ಯರಿಗೆ ಕುಟುಂಬ ನಿವೃತ್ತಿ ವೇತನಕ್ಕೆ ಉಪಬಂಧವನ್ನು ಕಲ್ಪಿಸುವುದಕ್ಕಾಗಿ ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956ನ್ನು (1957ರ ಕರ್ನಾಟಕ ಅಧಿನಿಯಮ 2) ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ತಿದ್ದುಪಡಿಯಿಂದಾಗಿ ಪ್ರತಿ ವರ್ಷಕ್ಕೆ ಅಂದಾಜು 694.00 ಲಕ್ಷ ರೂಪಾಯಿಗಳ ವೆಚ್ಚ ಉಂಟಾಗುತ್ತದೆ.

**ಎಸ್. ಸುರೇಶ್ ಕುಮಾರ್**
ನಗರಾಭಿವೃದ್ಧಿ, ಕಾನೂನು ಮತ್ತು
ಸಂಸದೀಯ ವ್ಯವಹಾರಗಳ ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

## ಅನುಬಂಧ

## ಕರ್ನಾಟಕ ವಿಧಾನಮಂಡಲದವರ ವೇತನಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956ನ್ನು (1957ರ ಕರ್ನಾಟಕ ಅಧಿನಿಯಮ 2)

Xx xx xx

**11ಎ. ಸದಸ್ಯರಿಗೆ ನಿವೃತ್ತಿ ವೇತನ ಇತ್ಯಾದಿ.–** Xx xx xx

(5) (1)ನೇ ಉಪ–ಪ್ರಕರಣದ ಖಂಡದ ಮೇರೆಗೆ ನಿವೃತ್ತಿ ವೇತನಕ್ಕೆ ಹಕ್ಕುಳ್ಳವನಾದ ಪ್ರತಿಯೊಬ್ಬ ಸದಸ್ಯನಿಗೆ,–

(i) ಅವನಿಗೆ ಮತ್ತು ಅವನ ಜೊತೆಗಾರನಿಗೆ ವರ್ಗಾವಣೆ ಮಾಡಲಾಗದ ಒಂದು ಪಾಸನ್ನು ಒದಗಿಸತಕ್ಕದ್ದು ಮತ್ತು ಅದು, ಅವನು ಯಾವುದೇ ಸಮಯದಲ್ಲಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ರಸ್ತೆ ಸಾರಿಗೆ ಸೇವೆಗಳ ಮೂಲಕ, ಕರ್ನಾಟಕದಲ್ಲಿ ಅವನು ಸಾಮಾನ್ಯವಾಗಿ ವಾಸಿಸುವ ಸ್ಥಳದಿಂದ ಕರ್ನಾಟಕದಲ್ಲಿನ ಅಥವಾ ರಾಜ್ಯದ ಹೊರಗಿನ ಯಾವುದೇ ಸ್ಥಳಕ್ಕೆ ಅದರಲ್ಲಿ ನಿಯಮಿಸಬಹುದಾದಂಥ ದರ್ಜೆಯಲ್ಲಿ ಹೋಗಿಬರಲು ಹಕ್ಕನ್ನು ನೀಡತಕ್ಕದ್ದು.

(ii) ನಿಯಮಿಸಬಹುದಾದಂಥ ನಿಯಮಗಳಿಗೆ ಒಳಪಟ್ಟು ಆತನು ಭಾರತದಲ್ಲಿ ರೈಲ್ವೆ ಮೂಲಕ ಮೊದಲನೇ ದರ್ಜೆ/ಎರಡನೇ ದರ್ಜೆ ಎಸಿಯಲ್ಲಿ ಒಂದು ವರ್ಷಕ್ಕೆ ಗರಿಷ್ಠ 35000 ಕಿಮೀ.ಗಳ ದೂರ ಪ್ರಯಾಣಿಸಲು ವಾಸ್ತವಿಕ ಪ್ರಯಾಣದ ವೆಚ್ಚಗಳ ಮರುಪಾವತಿಗೆ ಅರ್ಹನಾಗಿರತಕ್ಕದ್ದು.

Xx xx xx

**11ಬಿ. ಕುಟುಂಬ ನಿವೃತ್ತಿ ವೇತನ.–** (1) ಸದಸ್ಯರೊಬ್ಬರು ತಮ್ಮ ಪದಾವಧಿಯು ಮುಕ್ತಾಯವಾಗುವುದಕ್ಕೆ ಮುನ್ನವೇ ಮರಣ ಹೊಂದಿದಲ್ಲಿ, ಅಥವಾ 11ಎ ಪ್ರಕರಣದಡಿಯಲ್ಲಿ ನಿವೃತ್ತಿ ವೇತನಕ್ಕೆ ಅರ್ಹರಾದ ಒಬ್ಬ ವ್ಯಕ್ತಿಯು ಮೃತರಾದಲ್ಲಿ, 11ಎ ಪ್ರಕರಣದಡಿಯಲ್ಲಿ ಪ್ರತಿ ತಿಂಗಳಿಗೆ ದೊರೆಯತಕ್ಕ ನಿವೃತ್ತಿ ವೇತನದ ಶೇಕಡಾ ಐವತ್ತರ ದರದಲ್ಲಿ ಕುಟುಂಬ ನಿವೃತ್ತಿ ವೇತನವನ್ನು ಆತನ ಕುಟುಂಬಕ್ಕೆ ಸಂದಾಯ ಮಾಡತಕ್ಕದ್ದು.

X x x x x x

***KARNATAKA LEGISLATIVE ASSEMBLY***

***THIRTEENTH LEGISLATIVE ASSEMBLY***

***FOURTEENTH SESSION***

# *THE KARNATAKA LEGISLATURE SALARIES, PENSIONS AND ALLOWANCES (THIRD AMENDMENT) BILL, 2012*

***(L.A. Bill No. 44 of 2012)***

A Bill further to amend the Karnataka Legislature Salaries, Pensions and Allowances Act, 1956.

Whereas it is expedient further to amend the Karnataka Legislature Salaries, Pensions and Allowances Act, 1956 (Karnataka Act 2 of 1957) for the purposes hereinafter appearing;

Be it enacted by the Karnataka State Legislature in the Sixty -third year of the Republic of India, as follows:-

***1. Short title and commencement.-*** (1) This Act may be called the Karnataka Legislature Salaries, Pensions and Allowances (Third Amendment) Act, 2012.

(2) It shall come into force at once.

***2. Amendment of section 11A.-*** In the Karnataka Legislature Salaries, Pensions and Allowances Act, 1956 (Karnataka Act 2 of 1957) (herein after referred to as the Principal Act), in section 11A, in sub-section (5), for clause (ii), the following shall be substituted, namely:-

> ***"(ii) shall for every financial year be entitled to receive in such manner and subject to such conditions, as may be prescribed, a sum of rupees one lakh per annum payable in two equal installments in the months of April and October for the purpose of travelling either single or with a companion in one or more journeys by air or by railway in India."***

***3. Amendment of section 11B.-*** In section 11B, of the Principal Act in sub-section (1), for the words "pension drawn" the words "pension admissible" shall be substituted.

***4. Amendment of section 12.-*** In section 12 of the Principal Act, in clause (c), after sub clause (iii) the following shall be inserted, namely:-

"(iv) Every person who is drawing family pension under section 11B shall be entitled to rupees two thousand per month as fixed medical allowance, subject to the condition that the amount already reimbursed through the medical reimbursement claim if any during the said month, shall be deducted from the fixed medical allowance."

***STATEMENT OF OBJECTS AND REASONS***

It is considered necessary to amend the Karnataka Legislature Salaries, Pensions and Allowances Act, 1956 (Karnataka Act 2 of 1956) for reimbursement of actual travel expenses by air or train in India, subject to a maximum of Rupees One Lakh per annum to ex-members and also to provide family pension to the family members of ex-member.

Hence the Bill.

***FINANCIAL MEMORANDUM***

The probable expenditure from the proposed legislative measure is Rs. 694.00 (Rupees Six Ninety Four lakhs) per annum.

***S.SURESH KUMAR***
Minister for Urban Development,
Law and Parliamentary Affairs

***P. OMPRAKASHA***
Secretary
Karnataka Legislative Assembly

***ANNEXURE***

***Extract from the Karnataka Legislature Salaries, Pensions and Allowances Act, 1956 (Karnataka Act 2 of 1957)***

***11A. Pension to the members etc.-***

***x x*** ***x x*** ***x x***

(5) Every member entitled to pension under sub-section (1),-

(i) shall be provided with one non transferable pass for him and his companion which shall entitle them at any time to travel by road transport services of the Karnataka State Road Transport Corporation from the ordinary place of residence of such member in Karnataka to any place in the State of Karnataka or outside the State and back in such class of accommodation therein as may be prescribed;

(ii) Shall be entitled to reimbursement of actual travel expenses for self along with his one companion in first class / second class A/C for journeys by train in India to a maximum of 35000 k.m. per annum subject to such rules as may be prescribed.

***x x*** ***x x*** ***x x***

***11B. Family Pension.***- (1) Where a member dies before the expiry of his term or where a person eligible for pension under section 11-A dies, there shall be paid to his family, a family pension at the rate of fifty percent of pension drawn under section 11A per mensem.

***x x*** ***x x*** ***x x***

# ವಿಶೇಷ ಪತ್ರಿಕೆ

| ಭಾಗ – ***IV-A*** | ಬೆಂಗಳೂರು, ಮಂಗಳವಾರ, ಡಿಸೆಂಬರ್ ೧೧, ೨೦೧೨ (ಮಾರ್ಗಶಿರ ೨೦, ಶಕ ವರ್ಷ ೧೯೩೪) | ನಂ. ೧೦೯೨ |
|---|---|---|

***KARNATAKA LEGISLATIVE ASSEMBLY SECRETARIAT***

***NOTIFICATION***

***No. KLA/LGA/45/Bill/2012, Bangalore, Dated: 11.12.2012***

The following Bill was introduced in Legislative Assembly on 11.12.2012.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹದಿನೈದನೇ ಅಧಿವೇಶನ**

**ಕರ್ನಾಟಕ ಭೂ ಕಂದಾಯ (ಎರಡನೇ ತಿದ್ದುಪಡಿ) ವಿಧೇಯಕ, 2012**

**(2012ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 45)**

ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ನ್ನು (1964ರ ಕರ್ನಾಟಕ ಅಧಿನಿಯಮ 12) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೂರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**– (1) ಈ ಅಧಿನಿಯಮವನ್ನು ಕರ್ನಾಟಕ ಭೂ ಕಂದಾಯ (ಎರಡನೇ ತಿದ್ದುಪಡಿ) ಅಧಿನಿಯಮ, 2012 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 94ಸಿಸಿ ಪ್ರಕರಣದ ಸೇರ್ಪಡೆ.**– ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ (1964ರ ಕರ್ನಾಟಕ ಅಧಿನಿಯಮ 12) 94ಸಿ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"94ಸಿಸಿ. ನಗರ ಪ್ರದೇಶದಲ್ಲಿನ ಆಕ್ರಮಿತ ಭೂಮಿಯಲ್ಲಿನ ವಾಸದ ಮನೆಯ ನಿರ್ಮಾಣದ ಪ್ರಕರಣದಲ್ಲಿ ಭೂ ಮಂಜೂರಾತಿ.**– ಈ ಅಧಿನಿಯಮದಲ್ಲಿ ಏನೇ ಇದ್ದರೂ ಮತ್ತು ಈ ಪ್ರಕರಣದಲ್ಲಿ ಇಲ್ಲಿ ಇನ್ನು ಮುಂದೆ ಉಪಬಂಧಿಸಿದುದನ್ನು ಹೊರತುಪಡಿಸಿ, ನಿಯಮಿಸಲಾದ ಪ್ರಾಧಿಕಾರಕ್ಕೆ, ತಾನು ಸೂಕ್ತವೆಂದು ಭಾವಿಸುವ ಅಂಥ ವಿಚಾರಣೆಯನ್ನು ನಡೆಸಿದ ತರುವಾಯ 2012ನೇ ಜನವರಿ ಮೊದಲನೇ ದಿನಕ್ಕೆ ಮೊದಲು, ಯಾವೊಬ್ಬ ವ್ಯಕ್ತಿಯು, ನಗರ ಪ್ರದೇಶದಲ್ಲಿನ ಸರ್ಕಾರಕ್ಕೆ ಸೇರಿದ ಯಾವುದೇ ಕಂದಾಯ ಭೂಮಿಯನ್ನು ಅನಧಿಕೃತವಾಗಿ ಸ್ವಾಧೀನದಲ್ಲಿಟ್ಟುಕೊಂಡಿದ್ದಾನೆಂದು ಮತ್ತು ಅಂಥ ಭೂಮಿಯ ಮೇಲೆ ವಾಸದ ಮನೆಯನ್ನು ನಿರ್ಮಿಸಿಕೊಂಡಿದ್ದಾನೆಂದು, ಮನದಟ್ಟಾದಲ್ಲಿ, ಅಂಥ ವ್ಯಕ್ತಿಯು, ನಿಯಮಿಸಬಹುದಾದ ಅಂಥ ಅವಧಿಯೊಳಗೆ, ಅಂಥ ಫೀಜಿನೊಂದಿಗೆ ಅಂಥ ನಮೂನೆಯಲ್ಲಿ ಮತ್ತು ಅಂಥ ಮೊತ್ತವನ್ನು ಸಂದಾಯ ಮಾಡಿ ತನಗೆ ಸಲ್ಲಿಸಿದ ಅರ್ಜಿಯ ಮೇಲೆ, ಅಂಥ ವಿಧಾನದಲ್ಲಿ ಹಾಗೂ ಈ ಮುಂದಿನ ಷರತ್ತುಗಳಿಗೆ ಮತ್ತು ನಿಯಮಿಸಬಹುದಾದ ಅಂಥ ಇತರ ನಿರ್ಬಂಧಗಳು ಮತ್ತು ಷರತ್ತುಗಳಿಗೆ ಒಳಪಟ್ಟು ಮಂಜೂರಾತಿ ಆದೇಶದಲ್ಲಿ ನಿರ್ದಿಷ್ಟಪಡಿಸಬೇಕಾದ ಮನೆಯು ಆವರಿಸಿದಷ್ಟು ಅಂಥ ಭೂಮಿ ಮಂಜೂರಾತಿಯನ್ನು ನೀಡಬಹುದು, ಎಂದರೆ:–

(i) ಅರ್ಜಿದಾರನು 2012ನೇ ಜನವರಿ ಒಂದನೇ ದಿನಕ್ಕೆ ಮೊದಲು ವಾಸದ ಮನೆಯನ್ನು ನಿರ್ಮಿಸಿರುವುದಕ್ಕಾಗಿ ರುಜುವಾತನ್ನು ಸಲ್ಲಿಸತಕ್ಕದ್ದು;

(ii) ವಾಸದ ಮನೆಯಿಲ್ಲದ ಯಾವುದೇ ಖಾಲಿ ಭೂಮಿಯನ್ನು ಸಕ್ರಮಗೊಳಿಸತಕ್ಕದ್ದಲ್ಲ;

(iii) ಅಂಥ ಭೂಮಿಯ ಮಂಜೂರಾತಿಗಾಗಿ ಅರ್ಜಿಯನ್ನು ಸಲ್ಲಿಸಿದ ವ್ಯಕ್ತಿಗೆ ಅಥವಾ ಆತನ ಕುಟುಂಬದ ಯಾವೊಬ್ಬ ಸದಸ್ಯನಿಗೆ ಅರ್ಜಿಯನ್ನು ಸಲ್ಲಿಸಲಾದ ಭೂಮಿಯು ಇರುವ ನಗರ ಪ್ರದೇಶದೊಳಗೆ ಯಾವುದೇ ಕಟ್ಟಡ ಅಥವಾ ನಿವೇಶನವು ಇದ್ದಲ್ಲಿ ಸದರಿ ಭೂಮಿಗೆ ಮಂಜೂರಾತಿಯನ್ನು ನೀಡತಕ್ಕದ್ದಲ್ಲ;

(iv) ಯಾವೊಬ್ಬ ವ್ಯಕ್ತಿಯು, ತನ್ನ ಹೆಸರಿನಲ್ಲಿಯಾಗಲೀ ಅಥವಾ ತನ್ನ ಕುಟುಂಬದ ಯಾವೊಬ್ಬ ಸದಸ್ಯನ ಹೆಸರಿನಲ್ಲಿಯಾಗಲೀ ಒಂದಕ್ಕಿಂತ ಹೆಚ್ಚಿನ ವಾಸದ ಮನೆಯ, ಭೂಮಿಯ ಮಂಜೂರಾತಿಗೆ ಅರ್ಹನಾಗತಕ್ಕದ್ದಲ್ಲ.

**ವಿವರಣೆ:**– ಈ ಖಂಡದ ಉದ್ದೇಶಕ್ಕಾಗಿ "ಕುಟುಂಬದ ಸದಸ್ಯರು" ಎಂದರೆ ಪತಿ, ಪತ್ನಿ, ಅವಿವಾಹಿತ ಹೆಣ್ಣುಮಕ್ಕಳು ಮತ್ತು ಸಂದರ್ಭಾನುಸಾರವಾಗಿ ಅಪ್ರಾಪ್ತ ವಯಸ್ಕ ಗಂಡುಮಕ್ಕಳು.

(v) ಹಾಗೆ ಮಂಜೂರಾದ ಭೂಮಿಯನ್ನು ಮಂಜೂರಾತಿ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಹದಿನೈದು ವರ್ಷಗಳ ಅವಧಿಗಾಗಿ ಪರಭಾರೆ ಮಾಡತಕ್ಕದ್ದಲ್ಲ;

(vi) ಮಂಜೂರಾತಿ ಪಡೆದವನು ಕಟ್ಟಡವನ್ನು ವಾಸದ ಮನೆಯ ಉದ್ದೇಶಕ್ಕಾಗಿ ಹೊರತುಪಡಿಸಿ ಇತರ ಯಾವುದೇ ಉದ್ದೇಶಕ್ಕಾಗಿ ಬಳಸತಕ್ಕದ್ದಲ್ಲ.

(vii) ನಗರ ಪಾಲಿಕೆ ಅಥವಾ ಪುರಸಭೆಗಳು ಅಥವಾ ನಗರ ಸ್ಥಳೀಯ ಸಂಸ್ಥೆಗಳು ಅಥವಾ ಅಭಿವೃದ್ಧಿ ಪ್ರಾಧಿಕಾರಗಳು ಅಥವಾ ನಗರಗಳು ಮತ್ತು ನಗರ ಪ್ರದೇಶಗಳ ಮಿತಿಗಳೊಳಗೆ ಬರುವ ಪಟ್ಟಣ ಪಂಚಾಯತಿಗಳೂ ಒಳಗೊಂಡಂಥ ನಗರ ಯೋಜನಾ ಪ್ರಾಧಿಕಾರಗಳಿಗೆ ಸೇರಿದ ಪ್ರದೇಶಗಳಲ್ಲಿನ ಭೂಮಿಯ ಮೇಲೆ ನಿರ್ಮಿಸಿದ ಯಾವುದೇ ವಾಸದ ಮನೆಗೆ ಮಂಜೂರಾತಿ ನೀಡತಕ್ಕದ್ದಲ್ಲ.

(viii) ನಿವೇಶನ ಅಥವಾ ಪ್ಲಾಟ್‌ನಲ್ಲಿ 20' X 30' ಅಡಿಯನ್ನು ಮೀರದಂಥ ಪ್ಲಿಂತ್ ಏರಿಯಾವುಳ್ಳ ವಾಸದ ಮನೆ ಅಥವಾ ವಾಸದ ಮನೆಯ ವಾಸ್ತವ ನಿರ್ಮಿತ ಪ್ರದೇಶ ಇವುಗಳಲ್ಲಿ ಯಾವುದು ಕಡಿಮೆಯೊ ಅದನ್ನು ಸಕ್ರಮಗೊಳಿಸತಕ್ಕದ್ದು.

(ix) ಮಂಜೂರಾದ ಭೂಮಿಯಲ್ಲಿನ ವಾಸದ ಮನೆಯ ಆಕ್ರಮಿಸಿಕೊಂಡ ಭೂಮಿಯು,–

(ಎ) ಸ್ವಾಭಾವಿಕ ಒಳಚರಂಡಿಗಳು ಅಥವಾ ಕಾಲುವೆಗೆ ಅಡ್ಡವಾದ ದಾರಿಯಲ್ಲಿ ಇದ್ದಲ್ಲಿ;

(ಬಿ) ರಾಜ್ಯ ಸರ್ಕಾರ ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರದ ಒಡೆತನದ ಅಥವಾ ನಿಯಂತ್ರಣದ ಒಂದು ಪ್ರಾಧಿಕಾರಕ್ಕೆ ಸೇರಿದ್ದಲ್ಲಿ;

(ಸಿ) ಪ್ರಸ್ತುತ ಅಥವಾ ಪ್ರಸ್ತಾವಿತ ರಸ್ತೆಗಳು, ಒಳಗಿನ ಅಥವಾ ಹೊರಗಿನ ವರ್ತುಲ ರಸ್ತೆಗಳು, ರಾಷ್ಟ್ರೀಯ ಹೆದ್ದಾರಿಗಳು, ಅಗಲೀಕರಣಕ್ಕಾಗಿ ಪ್ರಸ್ತಾವಿಸಲಾದುವುಗಳೂ ಒಳಗೊಂಡಂತೆ ವರ್ತುಲ ರಸ್ತೆಗಳ ಮೇಲಿನ ಬೈಪಾಸ್ ಮತ್ತು ರೈಲ್ವೆ ಲೈನುಗಳು, ಟ್ರಾಮ್‌ವೇಗಳು, ಸಮೂಹ ಕ್ಷಿಪ್ರ ಸಾರಿಗೆ ಪದ್ಧತಿ ಯೋಜನೆಗಳು, ಸಂಪರ್ಕಗಳು ಮತ್ತು ಇತರ ನಾಗರಿಕ ಸೌಲಭ್ಯಗಳು ಅಥವಾ ಸಾರ್ವಜನಿಕ ಉಪಯುಕ್ತತೆಗಳ ಮಾರ್ಗದಲ್ಲಿ ಬರುತ್ತಿದ್ದಲ್ಲಿ;

(ಡಿ) ನಿವೇಶನ ಅಥವಾ ಪ್ಲಾಟನ್ನು ಆಕ್ರಮಿಸಿ ಕೊಂಡಿದ್ದ ಭೂಮಿಯ ನಿಯಮಿಸಲಾದ ಮಿತಿಗಿಂತ ಹೆಚ್ಚಾಗಿದ್ದಲ್ಲಿ;

(ಇ) ಅರಣ್ಯ ಭೂಮಿಯಾಗಿದ್ದಲ್ಲಿ;

(ಎಫ್) ಅರ್ಜಿದಾರನು ಸ್ವಾಮ್ಯವನ್ನು ಹೊಂದಿಲ್ಲದೆ ಬೇರೊಬ್ಬ ವ್ಯಕ್ತಿಗೆ ಸೇರಿದ್ದಲ್ಲಿ;

(ಜಿ) ಉದ್ಯಾನವನಗಳು, ಆಟದ ಮೈದಾನಗಳು, ಮುಕ್ತ ಸ್ಥಳಗಳು ಅಥವಾ ಯಾವುದೇ ನಾಗರಿಕ ಸೌಕರ್ಯಗಳನ್ನು ಒದಗಿಸುವುದಕ್ಕಾಗಿ ಮೀಸಲಿಟ್ಟಿದ್ದಲ್ಲಿ;

(ಹೆಚ್) ಅಕ್ಕಪಕ್ಕದ ಸ್ವತ್ತಿಗೆ, ಮಳೆ ನೀರು ಒಳಚರಂಡಿಗೆ, ಕೆರೆ ಏರಿ ಪ್ರದೇಶಗಳಿಗೆ, ನದಿ ದಡ ಅಥವಾ ಏರಿಗಳಿಗೆ ಮತ್ತು ಕಾಲುವೆಗಳಿಗೆ ಲಗತ್ತಾಗಿದ್ದಲ್ಲಿ ಅಥವಾ ಹೈಟೆನ್‌ಷನ್ ವಿದ್ಯುಚ್ಛಕ್ತಿ ಲೈನ್‌ಗಳ ಕೆಳಗಿದ್ದಲ್ಲಿ;

(ಐ) ಪರಂಪರೆ ಸ್ಮಾರಕಗಳಿಗಾಗಿ, ವಿಮಾನನಿಲ್ದಾಣಗಳಿಗಾಗಿ ಮತ್ತು ರಕ್ಷಣಾ ನಿಯಂತ್ರಣಗಳ ವಲಯ ನಿಬಂಧನೆಗಳಲ್ಲಿ ನಿರ್ದಿಷ್ಟಪಡಿಸಲಾದ ಎತ್ತರದ ನಿರ್ಬಂಧಗಳಿಗೆ ವಿರುದ್ಧವಾಗಿ ಬಳಕೆಯಾದಲ್ಲಿ;

(ಜೆ) ಯಾವುದೇ ಹೈ ಟೆನ್‌ಷನ್ ಲೈನ್‌ಗಳು ಅಥವಾ ಅಗ್ನಿ ರಕ್ಷಣೆ ಕ್ರಮಗಳಿಗೆ ಯಾವುದೇ ತೀರಿಕೆಗೆ ಅನುವರ್ತಿಯಾಗಿರದಿದ್ದಲ್ಲಿ;

(ಕೆ) ಭಾರತ ಸರ್ಕಾರದ ಪರಿಸರ ಮತ್ತು ಅರಣ್ಯ ಮಂತ್ರಾಲಯ, ಇದರ ಕರಾವಳಿ ವಲಯ ನಿಯಂತ್ರಣದಿಂದ ಆವೃತವಾಗಿರುವ ಪ್ರದೇಶದಲ್ಲಿದ್ದಲ್ಲಿ,

– ಆ ಭೂಮಿಯನ್ನು ಮಂಜೂರು ಮಾಡತಕ್ಕದ್ದಲ್ಲ:

ಪರಂತು, ಭೂ ಬಳಕೆಯ ಬದಲಾವಣೆಯ ಸಂಬಂಧದಲ್ಲಿನ ಉಲ್ಲಂಘನೆಯ ಸಕ್ರಮವನ್ನು ಸಾಧ್ಯವಾದಷ್ಟು ಮಟ್ಟಿಗೆ ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ಅಧಿನಿಯಮ, 1961ರ (1963ರ ಕರ್ನಾಟಕ ಅಧಿನಿಯಮ 11) 14–ಎ ಪ್ರಕರಣಕ್ಕೆ ಅನುಸಾರವಾಗಿ ಪ್ರತಿ ನಗರ ಪಾಲಿಕೆ, ಪುರಸಭೆಗಳು, ನಗರ ಸ್ಥಳೀಯ ಸಂಸ್ಥೆಗಳು, ಅಭಿವೃದ್ಧಿ ಪ್ರಾಧಿಕಾರಗಳು ಮತ್ತು ನಗರ ಯೋಜನಾ ಪ್ರಾಧಿಕಾರಗಳಿಂದ ಮಂಜೂರಾದ ಬೃಹತ್ ಯೋಜನೆಗಳಿಗನುಸಾರವಾಗಿ ಮಾಡತಕ್ಕದ್ದು.

**ವಿವರಣೆ:** ಈ ಪ್ರಕರಣದ ಉದ್ದೇಶಕ್ಕಾಗಿ, ನಗರ ಪ್ರದೇಶ ಎಂದರೆ:– ಈ ಮುಂದಿನ ಕೋಷ್ಟಕದ (2)ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿದ ನಗರಗಳು ಮತ್ತು ನಗರ ಸಭೆಗಳ ಮಿತಿಗಳೊಳಗೆ ಮತ್ತು ಅದರ (3)ನೇ ಅಂಕಣದಲ್ಲಿನ ಸಂವಾದಿ ನಮೂದುಗಳಲ್ಲಿ ನಿರ್ದಿಷ್ಟಪಡಿಸಿದ ಅಂಥ ಮಿತಿಗಳಿಂದ ಅಂಥ ಅಂತರದೊಳಗೆ ಬರುವ ಪ್ರದೇಶಗಳು:

| ಕ್ರಮ ಸಂಖ್ಯೆ | ಪ್ರದೇಶಗಳು | ಅಂತರ |
|---|---|---|
| (1) | (2) | (3) |
| 1. | ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976 ಅಡಿಯಲ್ಲಿನ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ | 18 ಕಿ.ಮೀ. |
| 2. | ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಉಪಬಂಧಗಳಡಿಯಲ್ಲಿ ಬರುವ ಅನುಕ್ರಮವಾಗಿ ಬೆಳಗಾವಿ, ಗುಲ್ಬರ್ಗಾ, ಹುಬ್ಬಳ್ಳಿ–ಧಾರವಾಡ, ಮಂಗಳೂರು ಮತ್ತು ಮೈಸೂರು | 10 ಕಿ.ಮೀ. |

| ಕ್ರಮ ಸಂಖ್ಯೆ | ಪ್ರದೇಶಗಳು | ಅಂತರ |
|---|---|---|
| (1) | (2) | (3) |
| 3. | ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ ಅಡಿಯಲ್ಲಿನ ಎಲ್ಲಾ ನಗರ ಸಭೆಗಳು | 5 ಕಿ.ಮೀ. |
| 4. | ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಅಡಿಯಲ್ಲಿನ ಇತರೆ ಪೌರನಿಗಮಗಳು | 10 ಕಿ.ಮೀ |
| 5. | ಟಿಎಂಸಿಗಳು ಮತ್ತು ಪಟ್ಟಣ ಪಂಚಾಯಿತಿಗಳು | 3 ಕಿ.ಮೀ |

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಕೆಲವು ಷರತ್ತುಗಳಿಗೊಳಪಟ್ಟು, 2012ನೇ ಜನವರಿ ಮೊದಲನೇ ದಿನಕ್ಕೆ ಮೊದಲು ನಗರ ಪ್ರದೇಶಗಳಲ್ಲಿನ ರೆವಿನ್ಯೂ ಭೂಮಿಗಳ ಮೇಲಿನ ವಾಸದ ಮನೆಗಳ ಅನಧಿಕೃತ ನಿರ್ಮಾಣವನ್ನು ಸಕ್ರಮಗೊಳಿಸುವುದಕ್ಕಾಗಿ ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ನ್ನು (1964ರ ಕರ್ನಾಟಕ ಅಧಿನಿಯಮ 12) ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನಾ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಪ್ರತ್ಯಾಯೋಜಿತ ಶಾಸನ ರಚನಾಧಿಕಾರ ಕುರಿತು ಜ್ಞಾಪನ ಪತ್ರ**

**ಖಂಡ 2 :** 94ಸಿಸಿ ಪ್ರಕರಣವು, ವಾಸದ ಮನೆಯ ಅನಧಿಕೃತ ಹಾಗೂ ನಿರ್ಮಾಣಗಳನ್ನು ಸಕ್ರಮಗೊಳಿಸುವುದಕ್ಕೆ ಸಂಬಂಧಿಸಿದಂತೆ ಫೀಜು ಮತ್ತು ಮೊಬಲಗನ್ನು ನಿಯಮಿಸಲು ಮತ್ತು ಅಂಥ ಸಕ್ರಮಕ್ಕೆ ಷರತ್ತುಗಳು ಮತ್ತು ನಿರ್ಬಂಧಗಳನ್ನು ನಿಯಮಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ.

**ಕೆ.ಎಸ್. ಈಶ್ವರಪ್ಪ**
ಉಪ ಮುಖ್ಯಮಂತ್ರಿಗಳು
(ಕಂದಾಯ ಹಾಗೂ ಗ್ರಾಮೀಣಾಭಿವೃದ್ಧಿ
ಮತ್ತು ಪಂಚಾಯತ್‌ರಾಜ್ ಸಚಿವರು)

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

**ಅನುಬಂಧ**

**ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ (1964ರ ಕರ್ನಾಟಕ ಅಧಿನಿಯಮ 12) ಉದ್ಧೃತ ಭಾಗ**

x x x x x x x x x

**94ಸಿ. ಆಕ್ರಮಿತ ಪ್ರದೇಶದಲ್ಲಿ ವಾಸದ ಮನೆಯ ನಿರ್ಮಾಣದ ಪ್ರಕರಣದಲ್ಲಿ ಭೂ ಮಂಜೂರಾತಿ.-** ಈ ಅಧಿನಿಯಮದಲ್ಲಿ ಏನೇ ಇದ್ದರೂ ಮತ್ತು ಈ ಪ್ರಕರಣದಲ್ಲಿ ಇಲ್ಲಿ ಇನ್ನು ಮುಂದೆ ಉಪಬಂಧಿಸಿದುದನ್ನು ಹೊರತುಪಡಿಸಿ, ನಿಯಮಿಸಲಾದ ಪ್ರಾಧಿಕಾರಕ್ಕೆ, 1998ರ ಏಪ್ರಿಲ್ ಹದಿನಾಲ್ಕನೇ ದಿನಕ್ಕೆ ಮುಂಚೆ, ಯಾವೊಬ್ಬ ವ್ಯಕ್ತಿಯು, ಸರ್ಕಾರಕ್ಕೆ ಸೇರಿದ ಯಾವುದೇ ಭೂಮಿಯನ್ನು ಅನಧಿಕೃತವಾಗಿ ಸ್ವಾಧೀನದಲ್ಲಿಟ್ಟುಕೊಂಡಿದ್ದಾನೆ ಮತ್ತು ಅಂಥ ಭೂಮಿಯ ಮೇಲೆ ವಾಸದ ಮನೆಯನ್ನು ಕಟ್ಟಿಕೊಂಡಿದ್ದಾನೆಂದು, ಅಂಥ ವಿಚಾರಣೆಯನ್ನು ನಡೆಸಿದ ತರುವಾಯ ಮನದಟ್ಟಾದಲ್ಲಿ, ಅದು ತಾನು ಸೂಕ್ತವೆಂದು ಭಾವಿಸುವಂತೆ, ಅಂಥ ವ್ಯಕ್ತಿಯು ತನಗೆ ಸಲ್ಲಿಸಿದ ಅರ್ಜಿಯ ಮೇಲೆ, ಅಂಥ ಅವಧಿಯೊಳಗೆ, ಅಂಥ ಫೀಜಿನೊಂದಿಗಿನ ಅಂಥ ನಮೂನೆಯಲ್ಲಿ ಮತ್ತು ನಿಯಮಿಸಬಹುದಾದ ಅಂಥ ಮೊತ್ತವನ್ನು ಸಂದಾಯ ಮಾಡಿದ ಮೇಲೆ, ಅಂಥ ವಿಧಾನದಲ್ಲಿ ಮತ್ತು ಈ ಮುಂದಿನ ಷರತ್ತುಗಳಿಗೆ ಮತ್ತು ನಿಯಮಿಸಬಹುದಾದ ಅಂಥ ಇತರ ನಿರ್ಬಂಧಗಳು ಮತ್ತು ಷರತ್ತುಗಳಿಗೆ ಒಳಪಟ್ಟು ಮಂಜೂರಾತಿ ಆದೇಶದಲ್ಲಿ ನಿರ್ದಿಷ್ಟಪಡಿಸಬೇಕಾದ ಮನೆಯು ಆವರಿಸಿದಷ್ಟು ಅಂಥ ಭೂಮಿಗೆ ಮಂಜೂರಾತಿ ನೀಡಬಹುದು.

ಪರಂತು, ಈ ಪ್ರಕರಣದಲ್ಲಿರುವುದಾವುದೂ ಅರಣ್ಯಭೂಮಿಗೆ ಅನ್ವಯವಾಗತಕ್ಕದ್ದಲ್ಲ:

ಮತ್ತೂ ಪರಂತು, ಈ ಪ್ರಕರಣದಲ್ಲಿರುವುದಾವುದೂ ಸರ್ಕಾರಿ ಭೂಮಿಯ ಮೇಲೆ ಮಾಡಲಾದ ಮತ್ತು ಕರ್ನಾಟಕ ನಗರ ಪ್ರದೇಶಗಳಲ್ಲಿನ ಅನಧಿಕೃತ ನಿರ್ಮಿತಿಗಳ ಸಕ್ರಮ ಅಧಿನಿಯಮ, 1991ರ ಅಡಿಯಲ್ಲಿ ಮಾಡಲಾದ ಅರ್ಜಿಯ ಸಂಬಂಧದಲ್ಲಿನ ಯಾವುದೇ ಅನಧಿಕೃತ ನಿರ್ಮಾಣಕ್ಕೆ ಅನ್ವಯವಾಗತಕ್ಕದ್ದಲ್ಲ.

x x x x x x x x x

## *KARNATAKA LEGISLATIVE ASSEMBLY*

## *THIRTEENTH LEGISLATIVE ASSEMBLY*

## *FIFTEENTH SESSION*

### *THE KARNATAKA LAND REVENUE (SECOND AMENDMENT) BILL, 2012*

### *(L.A. Bill No. 45 of 2012)*

A Bill further to amend the Karnataka Land Revenue Act, 1964.

Whereas it is expedient further to amend the Karnataka Land Revenue Act, 1964 (Karnataka Act 12 of 1964), for the purposes hereinafter appearing;

Be it enacted by the Karnataka State Legislature in the Sixty third year of the Republic of India, as follows:-

***1. Short title and commencement.-*** (1) This Act may be called the Karnataka Land Revenue (Second Amendment) Act, 2012.

(2) It shall come into force at once.

***2. Insertion of Section 94CC.-*** After Section 94C of the Karnataka Land Revenue Act, 1964 (Karnataka Act 12 of 1964) the following shall be inserted, namely.-

***"94CC.*** Grant of Land in case of construction of dwelling house in occupied land in urban area.- Notwithstanding anything contained in this Act and except as hereinafter provided in this section, the prescribed authority, if satisfied after holding such enquiry as it deems fit that any person is in unauthorized occupation of any revenue land belonging to Government and has constructed a dwelling house on such land, prior to first day of January 2012, in an urban area may on an application made to it by such person within such period, in such form along with such fee and on payment of such amount, as may be prescribed grant in such manner and subject to the following conditions and such other restrictions and conditions as may be prescribed, such land to the extent covered by the house to be specified in the order of grant, namely,-

(i) The applicant shall submit proof for having constructed the dwelling house prior to first day of January 2012;

(ii) No vacant land without a dwelling house shall be regularized;

(iii) No land shall be granted if the person who has applied for grant of such land or any member of his family owns any building or site within the urban area in which the land for which application is made is situated;

(iv) No person shall be eligible for grant of land for more than one dwelling house either in his name or in the name of any member of his family;

Explanation : For the purpose of this clause "Members of Family" means and includes the husband, wife, un-married daughters and minor sons as the case may be.

(v) The land so granted shall not be alienated for a period of fifteen years from the date of receipt of order of grant;

(vi) The grantee shall not use the building for any purposes other than as dwelling house;

(vii) No Land with dwelling house shall be granted in the areas belonging to the City Corporation or Municipalities or Urban Local bodies or Development Authorities or Town Planning Authority including Pattan (Town) Panchayat lying within the limits of cities and urban areas.

(viii) The plinth area of a dwelling house in a site or plot of land not exceeding 20' x 30' feet or actual built up area of the dwelling house whichever is less shall be regularized.

(ix) No land occupied by dwelling house shall be granted where such land,-

(a) lies in the line of natural drains or course of valley;

(b) belongs to an authority owned or controlled by the State Government or any local authority;

(c) coming in the way of existing or proposed roads, inner or outer ring roads, national highways, by pass over ring roads including those proposed for widening and railway lines, tramways, mass rapid transit system projects, communications and other civic facilities or public utilities;

(d) where occupied site or plot of land is of more than the prescribed limit;

(e) is a forest land;

(f) belongs to another person over which the applicant has no title;

(g) is reserved for parks, play grounds, open places or for providing any civic amenities;

(h) is abutting to neighbouring property, storm water drain, tank bed areas, river course or beds and canals or below the high tension electric lines;

(i) use is against height restrictions specified in zoning regulations for heritage monuments, aerodromes and Defence regulations;

(j) not conforms to any clearance from high-tension lines or fire protection measures;

(k) is in the area covered by the Coastal Zone Regulation of the Ministry of Environment and Forest, Government of India:

Provided that, regularization of violation in respect of change of land use shall be made as far as may be in accordance with Section 14-A of the Town and Country Planning Act, 1961 (Karnataka Act 11 of 1963) and is in accordance with the approved master plan of each City Corporation, Municipalities, Urban Local bodies, Development Authorities and Town Planning Authority.

Explanation: for purpose of this section urban area means:- areas lying within the limits of Cities and City Municipalities specified in column (2) of the table below and within such distance from such limits specified in the corresponding entries in column (3) thereof;

| ***Sl.No*** | ***Places*** | ***Distance*** |
|---|---|---|
| ***(1)*** | ***(2)*** | ***(3)*** |
| 1. | Bruhat Bangalore Mahanagarapalike under the Karnataka Municipal Corporations Act, 1976. | 18 Kms |
| 2. | The Cities of Belgaum, Gulbarga, Hubli-Dharwad, Mangalore and Mysore respectively under the provisions of Karnataka Municipal Corporations Act, 1976. | 10 Kms |
| 3. | All City Municipalities under the Karnataka Municipalities Act, 1964. | 5 Kms |
| 4. | Other Municipal Corporations under the Karnataka Municipal Corporations Act, 1976. | 10 Kms |
| 5. | TMCs and Town Panchayats. | 3 Kms |

## ***STATEMENT OF OBJECTS AND REASONS***

It is considered necessary to amend the Karnataka Land Revenue Act, 1964 (Karnataka Act 12 of 1964) for regularization of unauthorised construction of dwelling house constructed in Revenue Lands in urban areas prior to first day of January 2012.

Hence, the Bill.

## ***FINANCIAL MEMORANDUM***

There is no extra expenditure involved in the proposed Legislative measure.

## ***MEMORANDUM REGARDING DELEGATED LEGISLATION***

***Clause 2:-*** section 94CC empowers the State Government to make rules to prescribe the fee and amount for regularization of unauthorized constructions of dwelling house and to prescribe the conditions and restrictions for such regularization.

***K.S. ESHWARAPPA***
Deputy Chief Minister
(Minister for Revenue and Rural Development & Panchayat Raj)

***P. OMPRAKASHA***
Secretary
Karnataka Legislative Assembly

## *ANNEXURE*

***Extract from the Karnataka Land Revenue Act, 1964***

***(Karnataka Act 12 of 1964)***

***X X*** ***XX*** ***XX***

***94C. Grant of land in case of construction of dwelling house in occupied land.***- Notwithstanding anything contained in this Act and except as hereinafter provided in this section the prescribed authority, if satisfied after holding such enquiry as it deems fit that any person is in unauthorised occupation of any land belonging to the Government and has constructed a dwelling house on such land, since prior to the fourteenth day of April, 1998 may on an application made to it by such person within such period in such form along with such fee and on payment of such amount, as may be prescribed grant in such manner and subject to such restriction and conditions as may be prescribed such land to the extent covered by the house to be specified in the order of grant:

Provided that nothing in this section shall apply to forest land:

Provided further that nothing in this section shall apply to any unauthorised construction made on Government land and in respect of which application is made under the Karnataka Regularisation of Unauthorised Constructions in Urban Areas Act, 1991.

***X X*** ***XX*** ***XX***

# ವಿಶೇಷ ಪತ್ರಿಕೆ

| ಭಾಗ – ***IV-A*** | ಬೆಂಗಳೂರು, ಬುಧವಾರ, ಡಿಸೆಂಬರ್ ೧೨, ೨೦೧೨ (ಮಾರ್ಗಶಿರ ೨೧, ಶಕ ವರ್ಷ ೧೯೩೪) | ನಂ. ೧೦೯೩ |
|---|---|---|

***KARNATAKA LEGISLATIVE ASSEMBLY SECRETARIAT***

***NOTIFICATION***

***No. KLA/LGA/40/Bill/2012, Bangalore, Dated: 12.12.2012***

The following Bill was introduced in Legislative Assembly on 12.12.2012.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹದಿನೈದನೇ ಅಧಿವೇಶನ**

**ಕರ್ನಾಟಕ ಧನವಿನಿಯೋಗ (ಸಂಖ್ಯೆ 4) ವಿಧೇಯಕ, 2012**

**(2012ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 40)**

2012–13ನೇ ಹಣಕಾಸು ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಕೆಲವು ಅಧಿಕ ಮೊತ್ತಗಳ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡಲು ಒಂದು ವಿಧೇಯಕ.

2012–13ನೇ ಹಣಕಾಸು ವರ್ಷದ ಸೇವೆಗಳಿಗಾಗಿ ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಆ ಪೈಕಿಯಿಂದ ಕೆಲವು ಮೊತ್ತಗಳ ಸಂದಾಯ ಮತ್ತು ವಿನಿಯೋಗಕ್ಕಾಗಿ ಅಧಿಕಾರ ನೀಡುವುದು ಯುಕ್ತವಾಗಿರುವುದರಿಂದ.

ಇದು ಭಾರತ ಗಣರಾಜ್ಯದ ಅರವತ್ತ ಮೂರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಕೆಳಕಂಡಂತೆ ಅಧಿನಿಯಮಿತವಾಗಲಿ.

**1. ಸಂಕ್ಷಿಪ್ತ ಹೆಸರು.–** ಈ ಅಧಿನಿಯಮವನ್ನು ಕರ್ನಾಟಕ ಧನವಿನಿಯೋಗ (ಸಂಖ್ಯೆ 4) ಅಧಿನಿಯಮ, 2012 ಎಂದು ಕರೆಯತಕ್ಕದ್ದು.

**2. ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ 2012–13ನೇ ಹಣಕಾಸು ವರ್ಷಕ್ಕಾಗಿ 919765.24 ಲಕ್ಷ ರೂಪಾಯಿಗಳ ನೀಡಿಕೆ.–** ಅನುಸೂಚಿಯ 2ನೇ ಅಂಕಣದಲ್ಲಿ ನಿರ್ದಿಷ್ಟ ಪಡಿಸಲಾದ ಸೇವೆಗಳ ಸಂಬಂಧದಲ್ಲಿ 2012–13 ನೇ ಹಣಕಾಸು ವರ್ಷದಲ್ಲಿ ಸಂದಾಯ ಮಾಡುವಾಗ ಒದಿಗ ಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ ಅನುಸೂಚಿಯ 5ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾಗಿರುವ ಒಂಬತ್ತು ಸಾವಿರದ ಒಂದು ನೂರು ತೊಂಬತ್ತೇಳು ಕೋಟಿ ಅರವತ್ತೈದು ಲಕ್ಷ ಇಪ್ಪತ್ನಾಲ್ಕು ಸಾವಿರ ರೂಪಾಯಿಗಳು ಮಾತ್ರ ಮೀರದಷ್ಟು ಕರ್ನಾಟಕ ರಾಜ್ಯ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡತಕ್ಕದ್ದು ಮತ್ತು ಉಪಯೋಗಿಸತಕ್ಕದ್ದು.

**3. ಧನವಿನಿಯೋಗ.–** ಈ ಅಧಿನಿಯಮದ ಮೂಲಕ, ಕರ್ನಾಟಕ ರಾಜ್ಯದ ಸಂಚಿತ ನಿಧಿಯಿಂದ ಮತ್ತು ಅದರೊಳಗಿಂದ ಸಂದಾಯ ಮಾಡಲು ಮತ್ತು ಉಪಯೋಗಿಸಲು ಅಧಿಕಾರ ನೀಡಲಾದ ಮೊತ್ತಗಳನ್ನು ಸದರಿ ವರ್ಷಕ್ಕೆ ಸಂಬಂಧಪಟ್ಟಂತೆ ಅನುಸೂಚಿಯಲ್ಲಿ ತಿಳಿಸಲಾದ ಸೇವೆಗಳು ಮತ್ತು ಉದ್ದೇಶಗಳಿಗಾಗಿ ವಿನಿಯೋಗಿಸತಕ್ಕದ್ದು.

**ಅನುಸೂಚಿ**

**(2 ಮತ್ತು 3ನೇ ಪ್ರಕರಣಗಳನ್ನು ನೋಡಿ)**

(ರೂ. ಲಕ್ಷಗಳಲ್ಲಿ)

| ಬೇಡಿಕೆ ಸಂಖ್ಯೆ | ಸೇವೆಗಳು ಮತ್ತು ಉದ್ದೇಶಗಳು | | ಮೀರದ ಮೊಬಲಗು | | ಒಟ್ಟು |
|---|---|---|---|---|---|
| | | | ವಿಧಾನಸಭೆಯಿಂದ ಪುರಸ್ಕೃತವಾದುದನ್ನು | ಸಂಚಿತ ನಿಧಿಯಿಂದ ಪ್ರಭೃತವಾದುದನ್ನು | |
| 1 | 2 | | 3 | 4 | 5 |
| 01 | ಕೃಷಿ ಮತ್ತು ತೋಟಗಾರಿಕೆ | ರಾಜಸ್ವ | 28,147.50 | – | 28,147.50 |
| 02 | ಪಶುಸಂಗೋಪನೆ ಮತ್ತು ಮೀನುಗಾರಿಕೆ | ರಾಜಸ್ವ | 3,479.92 | – | 3,479.92 |
| | | ಬಂಡವಾಳ | 179.49 | – | 179.49 |
| 03 | ಆರ್ಥಿಕ | ರಾಜಸ್ವ | 5,386.79 | – | 5,386.79 |
| | | ಬಂಡವಾಳ | 1,519.08 | – | 1,519.08 |
| 04 | ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ | ರಾಜಸ್ವ | 4,558.54 | 1,340.87 | 5,899.41 |
| 05 | ಒಳಾಡಳಿತ ಮತ್ತು ಸಾರಿಗೆ | ರಾಜಸ್ವ | 23,003.36 | – | 23,003.36 |
| | | ಬಂಡವಾಳ | 1,600.00 | – | 1,600.00 |
| 06 | ಮೂಲಭೂತ ಸೌಕರ್ಯ ಅಭಿವೃದ್ಧಿ | ಬಂಡವಾಳ | – | – | – |
| 07 | ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತಿ ರಾಜ್ | ರಾಜಸ್ವ | 83,975.77 | – | 83,975.77 |
| | | ಬಂಡವಾಳ | 23,939.00 | – | 23,939.00 |
| 08 | ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ | ರಾಜಸ್ವ | 3,795.29 | – | 3,795.29 |
| 09 | ಸಹಕಾರ | ರಾಜಸ್ವ | 185,014.36 | – | 185,014.36 |
| | | ಬಂಡವಾಳ | 600.00 | – | 600.00 |
| 10 | ಸಮಾಜ ಕಲ್ಯಾಣ | ರಾಜಸ್ವ | 18,121.63 | – | 18,121.63 |
| 11 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ | ರಾಜಸ್ವ | 1,492.32 | – | 1,492.32 |
| | | ಬಂಡವಾಳ | 200.00 | – | 200.00 |
| 12 | ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವೆಗಳು | ರಾಜಸ್ವ | 517.75 | – | 517.75 |
| | | ಬಂಡವಾಳ | 17.98 | – | 17.98 |
| 13 | ಆಹಾರ ಮತ್ತು ನಾಗರೀಕ ಸರಬರಾಜು | ರಾಜಸ್ವ | 1,312.22 | – | 1,312.22 |
| 14 | ಕಂದಾಯ | ರಾಜಸ್ವ | 42,247.06 | – | 42,247.06 |
| 15 | ಮಾಹಿತಿ ತಂತ್ರಜ್ಞಾನ | ರಾಜಸ್ವ | 30.16 | – | 30.16 |
| 16 | ವಸತಿ | ರಾಜಸ್ವ | 50,951.06 | – | 50,951.06 |
| 17 | ಶಿಕ್ಷಣ | ರಾಜಸ್ವ | 98,219.01 | – | 98,219.01 |
| | | ಬಂಡವಾಳ | 3,360.00 | – | 3,360.00 |
| 18 | ವಾಣಿಜ್ಯ ಮತ್ತು ಕೈಗಾರಿಕೆ | ರಾಜಸ್ವ | 1,382.82 | – | 1,382.82 |
| | | ಬಂಡವಾಳ | 4,532.99 | – | 4,532.99 |
| 19 | ನಗರಾಭಿವೃದ್ಧಿ | ರಾಜಸ್ವ | 4,788.77 | – | 4,788.77 |
| 20 | ಲೋಕೋಪಯೋಗಿ | ರಾಜಸ್ವ | 14,642.10 | – | 14,642.10 |
| | | ಬಂಡವಾಳ | 52,100.00 | – | 52,100.00 |
| 21 | ಜಲಸಂಪನ್ಮೂಲ | ರಾಜಸ್ವ | 1,748.22 | – | 1,748.22 |
| | | ಬಂಡವಾಳ | 4,330.00 | – | 4,330.00 |
| 22 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ | ರಾಜಸ್ವ | 15,783.59 | – | 15,783.59 |
| | | ಬಂಡವಾಳ | 1,101.00 | – | 1,101.00 |

| ಬೇಡಿಕೆ ಸಂಖ್ಯೆ | ಸೇವೆಗಳು ಮತ್ತು ಉದ್ದೇಶಗಳು | | ಮೀರದ ಮೊಬಲಗು | | ಒಟ್ಟು |
|---|---|---|---|---|---|
| | | | ವಿಧಾನಸಭೆಯಿಂದ ಪುರಸ್ಕೃತವಾದುದನ್ನು | ಸಂಚಿತ ನಿಧಿಯಿಂದ ಪ್ರಭೃತವಾದುದನ್ನು | |
| 1 | 2 | | 3 | 4 | 5 |
| 23 | ಕಾರ್ಮಿಕ | ರಾಜಸ್ವ | 4,904.41 | – | 4,904.41 |
| 24 | ಇಂಧನ | ರಾಜಸ್ವ | 1,25,176.25 | – | 1,25,176.25 |
| 25 | ಕನ್ನಡ ಮತ್ತು ಸಂಸ್ಕೃತಿ | ರಾಜಸ್ವ | 474.40 | – | 474.40 |
| 26 | ಯೋಜನೆ, ಸಾಂಖ್ಯಿಕ, ವಿಜ್ಞಾನ ಮತ್ತು ತಂತ್ರಜ್ಞಾನ | ರಾಜಸ್ವ | 821.79 | – | 821.79 |
| | | ಬಂಡವಾಳ | 500.00 | – | 500.00 |
| 27 | ಕಾನೂನು | ರಾಜಸ್ವ | 3,174.77 | – | 3,174.77 |
| 28 | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ | ರಾಜಸ್ವ | 1,294.97 | – | 1,294.97 |
| 29 | ಋಣ ಮೇಲುಸ್ತುವಾರಿ | ರಾಜಸ್ವ | – | 1,00,000.00 | 1,00,000.00 |
| | **ಮೊತ್ತ** | **ರಾಜಸ್ವ** | **7,24,444.83** | **1,01,340.87** | **8,25,785.70** |
| | | **ಬಂಡವಾಳ** | **93,979.54** | – | **93,979.54** |
| | **ಒಟ್ಟು ಮೊತ್ತ** | | **8,18,424.37** | **1,01,340.87** | **9,19,765.24** |

### ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

2012–13ನೇ ಹಣಕಾಸು ವರ್ಷದಲ್ಲಿ ಸಂದಾಯ ಮಾಡುವಾಗ ಒದಗಿಬರುವ ಹಲವಾರು ಖರ್ಚುಗಳನ್ನು ವಹಿಸುವುದಕ್ಕಾಗಿ ರಾಜ್ಯದ ಸಂಚಿತ ನಿಧಿಯೊಳಗಿನಿಂದ ವಿನಿಯೋಗಿಸಲು ಭಾರತ ಸಂವಿಧಾನದ 205ನೇ (1) (ಎ) ಅನುಚ್ಛೇದದ ಉಪಬಂಧಗಳಿಗನುಸಾರವಾಗಿ ಈ ವಿಧೇಯಕವನ್ನು ಮಂಡಿಸಲಾಗಿದೆ.

**ಜಗದೀಶ್ ಶೆಟ್ಟರ್**
ಮುಖ್ಯಮಂತ್ರಿಗಳು ಹಾಗೂ
ಹಣಕಾಸು ಸಚಿವರು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

## *KARNATAKA LEGISLATIVE ASSEMBLY*

## *THIRTEENTH LEGISLATIVE ASSEMBLY*

## *FIFTEENTH SESSION*

### *THE KARNATAKA APPROPRIATION (No. 4) BILL, 2012*

### *(L.A. Bill No. 40 of 2012)*

A Bill to authorize payment and appropriation of certain further sums from and out of the Consolidated Fund of the State of Karnataka for the Services of the Financial Year 2012-13.

Whereas it is expedient to authorize payment and appropriation of certain further sums from and out of the Consolidated fund of the State for the services of the Financial Year 2012-13.

Be it enacted by the Karnataka State Legislature in the Sixty Third Year of the Republic of India as follows:-

***1. Short Title :*** This Act may be called the Karnataka Appropriation (No.4) Act, 2012.

***2. Issue of Rupees 919765.24*** Lakhs out of the Consolidated Fund of the State of Karnataka for the Financial year ***2012-13 :*** From and out of the Consolidated Fund of the State of Karnataka, there may be paid and applied sums not exceeding those specified in column 5 of the Schedule amounting in the aggregate to the sum of Rupees ***Nine Thousand one Hundred and Ninety Seven Crore Sixty Five Lakh Twenty Four Thousand only*** towards defraying the several charges which will come in the course of payment during the Financial Year 2012-13 in respect of the services specified in column 2 of the schedule.

***3. Appropriation :-*** The sums authorized to be paid and applied from and out of the Consolidated Fund of the State by this Act shall be appropriated for the services and purposes expressed in the Schedule in relation to the said year.

**SCHEDULE**
**(See Sections 2 and 3)**

**(Rs. in Lakhs)**

| Demand No. | Service & Purpose | | Sums not exceeding voted by the Legislative Assembly | Sums not exceeding Charged on the consolidated Fund | Total |
|---|---|---|---|---|---|
| 1 | 2 | | 3 | 4 | 5 |
| 01 | Agriculture and Horticulture | Revenue | 28,147.50 | ... | 28,147.50 |
| 02 | Animal Husbandry and Fisheries | Revenue | 3,479.92 | ... | 3,479.92 |
| | | Capital | 179.49 | ... | 179.49 |
| 03 | Finance | Revenue | 5,386.79 | ... | 5,386.79 |
| | | Capital | 1,519.08 | ... | 1,519.08 |
| 04 | Department of Personnel and Administrative Reforms | Revenue | 4,558.54 | 1340.87 | 5,899.41 |
| 05 | Home and Transport | Revenue | 23,003.36 | ... | 23,003.36 |
| | | Capital | 1,600.00 | ... | 1,600.00 |
| 06 | Infrastructure Development | Capital | ... | ... | ... |
| 07 | Rural Development and Panchayath Raj | Revenue | 83,975.77 | ... | 83,975.77 |
| | | Capital | 23,939.00 | ... | 23,939.00 |
| 08 | Forest, Ecology and Environment | Revenue | 3,795.29 | ... | 3,795.29 |
| 09 | Co - operation | Revenue | 185,014.36 | ... | 185,014.36 |
| | | Capital | 600.00 | ... | 600.00 |
| 10 | Social Welfare | Revenue | 18,121.63 | ... | 18,121.63 |
| 11 | Women and Child Development | Revenue | 1,492.32 | ... | 1,492.32 |
| | | Capital | 200.00 | | 200.00 |
| 12 | Information, Tourism and Youth Services | Revenue | 517.75 | ... | 517.75 |
| | | Capital | 17.98 | ... | 17.98 |
| 13 | Food and Civil Supplies | Revenue | 1,312.22 | ... | 1,312.22 |
| 14 | Revenue | Revenue | 42,247.06 | ... | 42,247.06 |
| 15 | Information Technology | Revenue | 30.16 | ... | 30.16 |
| 16 | Housing | Revenue | 50,951.06 | | 50,951.06 |
| 17 | Education | Revenue | 98,219.01 | ... | 98,219.01 |
| | | Capital | 3,360.00 | ... | 3,360.00 |
| 18 | Commerce and Industries | Revenue | 1,382.82 | ... | 1,382.82 |
| | | Capital | 4,532.99 | ... | 4,532.99 |
| 19 | Urban Development | Revenue | 4,788.77 | ... | 4,788.77 |
| 20 | Public Works | Revenue | 14,642.10 | ... | 14,642.10 |
| | | Capital | 52,100.00 | ... | 52,100.00 |
| 21 | Water Resources | Revenue | 1,748.22 | ... | 1,748.22 |
| | | Capital | 4,330.00 | ... | 4,330.00 |
| 22 | Health and Family Welfare | Revenue | 15,783.59 | ... | 15,783.59 |
| | | Capital | 1,101.00 | ... | 1,101.00 |
| 23 | Labour | Revenue | 4,904.41 | ... | 4,904.41 |
| 24 | Energy | Revenue | 1,25,176.25 | ... | 1,25,176.25 |
| 25 | Kannada & Culture | Revenue | 474.40 | ... | 474.40 |
| 26 | Planning, Statistics, Science and Technology | Revenue | 821.79 | ... | 821.79 |
| | | Capital | 500.00 | ... | 500.00 |

| Demand No. | Service & Purpose | | Sums not exceeding | | Total |
|---|---|---|---|---|---|
| | | | voted by the Legislative Assembly | Charged on the consolidated Fund | |
| 1 | 2 | | 3 | 4 | 5 |
| 27 | Law | Revenue | 3,174.77 | ... | 3,174.77 |
| 28 | Parliamentary Affairs and Legislation | Revenue | 1,294.97 | ... | 1,294.97 |
| 29 | Debt Servicing | Revenue | ... | 1,00,000.00 | 1,00,000.00 |
| | ***TOTAL*** | ***Revenue*** | ***7,24,444.83*** | ***1,01,340.87*** | ***8,25,785.70*** |
| | | ***Capital*** | ***93,979.54*** | ***...*** | ***93,979.54*** |
| | ***GRAND TOTAL*** | | ***8,18,424.37*** | ***1,01,340.87*** | ***9,19,765.24*** |

***STATEMENT OF OBJECTS AND REASONS***

This Bill is introduced in pursuance of the provisions of Article 205 (1) (a) of the Constitution of India to provide for the appropriation out of the Consolidated Fund of the State towards defraying the several charges which will come in course of payment during the part of the Financial Year 2012-13.

***JAGADISH SHETTAR***
Chief Minister and
Minister for Finance

***P. OMPRAKASHA***
Secretary
Karnataka Legislative Assembly

# ವಿಶೇಷ ಪತ್ರಿಕೆ

| ಭಾಗ – ***IV-A*** | ಬೆಂಗಳೂರು, ಬುಧವಾರ, ಡಿಸೆಂಬರ್ ೧೨, ೨೦೧೨ (ಮಾರ್ಗಶಿರ ೨೧, ಶಕ ವರ್ಷ ೧೯೩೪) | ನಂ. ೧೦೯೪ |
|---|---|---|

***HIGH COURT OF KARNATAKA, BANGALORE***

***NOTIFICATION***

## ***No HCE 510/2012 BANGALORE DATED 12TH DECEMBER 2012***

***THE HIGH COURT OF KARNATAKA SERVICE***
***(CONDITIONS OF SERVICE AND RECRUITMENT) (III AMENDMENT) RULES, 2012***

In exercise of the powers conferred under Article 229(1) and (2) of the Constitution of India read with Rules 6, 7 and 11 of the High Court of Karnataka Service (Conditions of Service and Recruitment) Rules, 1973, and all other powers enabling thereunto, Hon'ble the Chief Justice, High Court of Karnataka with the previous approval of the Governor of Karnataka makes the following rules to amend the High Court of Karnataka Service (Conditions of Service and Recruitment) Rules, 1973.

***Title and commencement:*** (1) These Rules may be called as High Court of Karnataka Service (Conditions of Service and Recruitment) (III Amendment) Rules, 2012.

(2) They shall come into force from the date of publication in the Karnataka Gazette.

***Amendment to Schedule - I***

(1) Under the head Group-'A', after Sl. No 4B (Director), the following entry shall be inserted:

***" 4C. Director, Arbitration Centre".***

(2) Under the head Group-'A', after Sl. No 5A (Deputy Director), the following entry shall be inserted:

***" 5B. Deputy Director, Arbitration Centre".***

***Amendment to Schedule - II:***

1) Under the head Group-'A', after Sl. No 7 (Director), the following entry shall be inserted:

| Sl. No | Designation | Permanent | Temporary | Scale of Pay |
|---|---|---|---|---|
| 1 | 2 | 3 | 4 | 5 |
| 7A | Director, Arbitration Centre | 1 | - | Deputation post<br><br>(In case of appointment of a retired District Judge—Last pay drawn by such retired officer on the date of superannuation minus pension and perks and benefits attached to the post |

2) Under the head Group-'A', after Sl. No 9 (Deputy Director), the following entry shall be inserted:

| Sl. No | Designation | Permanent | Temporary | Scale of Pay |
|---|---|---|---|---|
| 1 | 2 | 3 | 4 | 5 |
| 9A | Deputy Director, Arbitration Centre | 2 | - | Deputation post |

3) Under the head Group-'B', in column no. 3 against Sl. No 24 (Section Officer) the figure "72" for the figure "70" shall be substituted.

4) Under the head Group-'C', in column no. 3 against Sl. No 39 (First Division Assistant) the figure "207" for the figure "205" shall be substituted.

5) Under the head Group-'C', in column no. 3 against Sl. No 41 (Assistant Librarian) the figure "14" for the figure "13" shall be substituted.

6) Under the head Group-'C', in column no. 3 against Sl. No 44 (Stenographers) the figure "61" for the figure "57" shall be substituted.

7) Under the head Group-'C', in column no. 3 against Sl. No 57 (Second Division Assistant) the figure "301" for the figure "299" shall be substituted.

8) Under the head Group-'C', in column no. 3 against Sl. No 58 (Typists) the figure "252" for the figure "249" shall be substituted.

9) Under the head Group-'C', in column no. 3 against Sl. No 59 (Receptionist) the figure "2" for the figure "1" shall be substituted.

10) Under the head Group-'C', in column no. 3 against Sl. No 62 (Drivers) the figure "69" for the figure "67" shall be substituted.

11) Under the head Group-'D', in column no. 3 against Sl. No 70 (Attenders) the figure "56" for the figure "53" shall be substituted.

12) Under the head Group-'D', in column no. 3 against Sl. No 77 (Peons) the figure "315" for the figure "310" shall be substituted.

***Amendment to Schedule - III:***

1) After Sl. No 3B (Director), the following entry shall be inserted:

| Sl. No | Designation | Method of recruitment |
|---|---|---|
| 1 | 2 | 5 |
| 3C | Director, Arbitration Centre | By deputation of an officer of the cadre of District Judge of Karnataka Judicial Service.<br>**OR**<br>By appointment of a retired District Judge.<br>In such a case the appointee shall be entitled to last pay drawn by such retired officer on the date of superannuation minus pension and perks and benefits attached to the post. |

2) After Sl. No 4A (Deputy Director), the following entry shall be inserted:

| Sl. No | Designation | Method of recruitment |
|---|---|---|
| 1 | 2 | 5 |
| 4B | Deputy Director, Arbitration Centre | By deputation of an officer of the cadre of Civil Judge (Sr. Dn) or Civil Judge (Jr. Dn) of Karnataka Judicial Service. |

***BY ORDER OF HON'BLE THE CHIEF JUSTICE,***

***Sd/-***
***P. KRISHNA BHAT***
REGISTRAR GENERAL

**ವಿಶೇಷ ಪತ್ರಿಕೆ**

| ಭಾಗ – IV-A | ಬೆಂಗಳೂರು, ಬುಧವಾರ, ಡಿಸೆಂಬರ್ ೧೨, ೨೦೧೨ (ಮಾರ್ಗಶಿರ ೨೧, ಶಕ ವರ್ಷ ೧೯೩೪) | ನಂ. ೧೦೯೫ |
|---|---|---|

**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/43/Bill/2012, Bangalore, Dated: 12.12.2012**

The following Bill was introduced in Legislative Assembly on 12.12.2012.

**ಕರ್ನಾಟಕ ವಿಧಾನ ಸಭೆ**

**ಹದಿಮೂರನೇ ವಿಧಾನ ಸಭೆ**

**ಹದಿನೈದನೇ ಅಧಿವೇಶನ**

**ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ವಿಧೇಯಕ, 2012**

**(2012ರ ವಿಧಾನ ಸಭೆಯ ವಿಧೇಯಕ ಸಂಖ್ಯೆ 43)**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ನ್ನು (1959ರ ಕರ್ನಾಟಕ ಅಧಿನಿಯಮ 11) ಮತ್ತಷ್ಟು ತಿದ್ದುಪಡಿ ಮಾಡವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೂರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮತವಾಗಲಿ ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ಅಧಿನಿಯಮ, 2012 ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ದೊಡ್ಡ ಹೆಸರು ಮತ್ತು ಪ್ರಸ್ತಾವನೆಯ ತಿದ್ದುಪಡಿ.–** ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರಲ್ಲಿ (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) ಪ್ರಸ್ತಾವನೆಯಲ್ಲಿ ಎರಡು ಸ್ಥಳಗಳಲ್ಲಿ, "ಸಹಕಾರ ಸಂಘಗಳ ಸಂಬಂಧಪಟ್ಟ ಕಾನೂನುಗಳನ್ನು ಕ್ರೋಡಿಕರಿಸಲು" ಎಂಬ ಪದಗಳ ತರುವಾಯ, "ಮತ್ತು ಸಹಕಾರ ಸಂಘಗಳ ಸ್ವಯಂ ರಚನೆ, ಸ್ವಾಯತ್ತ ಕಾರ್ಯನಿರ್ವಹಣೆ, ಪ್ರಜಾಸತ್ತಾತ್ತಕ ನಿಯಂತ್ರಣ ಮತ್ತು ವೃತ್ತಿಪರ ವ್ಯವಸ್ಥಾಪನೆಯ ಸಂವರ್ಧನೆಗೆ ಪ್ರಯತ್ನಿಸಲು" ಎಂಬ ಪದಗಳನ್ನು ಸೇರಿಸತಕ್ಕದ್ದು.

**3. 2ನೇ ಪ್ರಕರಣದ ತಿದ್ದುಪಡಿ.**–ಮೂಲ ಅಧಿನಿಯಮದ 2ನೇ ಪ್ರಕರಣದಲ್ಲಿ:–

(i) ಈಗಿರುವ (ಎ–1) ಮತ್ತು (ಎ–1–1) ಖಂಡಗಳಿಗೆ ಅನುಕ್ರಮವಾಗಿ (ಎ–1–1) ಮತ್ತು (ಎ–1–2) ಎಂದು ಪುನರ್ ಸಂಖ್ಯೆ ನೀಡತಕ್ಕದ್ದು.

(ii) (ಎ) ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು ಎಂದರೆ:–

"(ಎ–1) "ಕಾರ್ಯಾಚರಣೆಯ ಪ್ರದೇಶ' ಎಂದರೆ, ಯಾವ ಪ್ರದೇಶದಿಂದ ಸದಸ್ಯತ್ವವನ್ನು ಪಡೆಯಲಾಗಿದೆಯೋ ಆ ಪ್ರದೇಶ ಅಥವಾ ಸಂಘದ ಉಪ ವಿಧಿಗಳಲ್ಲಿ ನಿರ್ದಿಷ್ಟ ಪಡಿಸಲಾದಂಥ ಪ್ರದೇಶ"

(iii) (ಎ–2–1)ಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಎ–2–1) "ಹಿಂದುಳಿದ ವರ್ಗ" ಎಂದರೆ ಸರ್ಕಾರವು ಕಾಲಕಾಲಕ್ಕೆ ಹಿಂದುಳಿದ ವರ್ಗ ಎಂದು ವರ್ಗೀಕರಣ ಮಾಡಬಹುದಾದ ಮತ್ತು ಅಧಿಸೂಚಿಸಬಹುದಾದ ನಾಗರಿಕರ ವರ್ಗ ಅಥವಾ ವರ್ಗಗಳು.

(iv) (ಬಿ) ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಬಿ) 'ಮಂಡಲಿ' ಎಂದರೆ, ಯಾವುದೇ ಹೆಸರಿನಿಂದ ಕರೆಯಲಾಗುವ ಯಾವ ನಿರ್ದೇಶಕರ ಮಂಡಲಿಗೆ ಅಥವಾ ಆಡಳಿತ ನಿಕಾಯಕ್ಕೆ ಸಂಘದ ವ್ಯವಹಾರಗಳನ್ನು ವ್ಯವಸ್ಥಾಪನೆಯ ನಿರ್ದೇಶನ ಮತ್ತು ನಿಯಂತ್ರಣವನ್ನು ವಹಿಸಿಕೊಡಲಾಗಿದೆಯೋ ಆ ಸಹಕಾರ ಸಂಘದ ನಿರ್ದೇಶಕರ ಮಂಡಲಿ ಅಥವಾ ಆಡಳಿತ ನಿಕಾಯ"

(v) (ಬಿ–4) ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಬಿ–5) 'ಸಹಕಾರಿ ಚುನಾವಣಾ ಆಯೋಗ' ಎಂದರೆ, 39 ಎಎ ಪ್ರಕರಣದ ಅಡಿಯಲ್ಲಿ ರಚಿತವಾದ ಸಹಕಾರಿ ಚುನಾವಣಾ ಆಯೋಗ",

(vi) (ಡಿ–1) ಖಂಡದಲ್ಲಿ, "ಅಥವಾ ವರ್ಷ" ಎಂಬ ಪದಗಳನ್ನು ಬಿಟ್ಟು ಬಿಡತಕ್ಕದ್ದು;

(vii) (ಇ–2) ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು ಎಂದರೆ;

"(ಇ–2–1) 'ನಿರ್ದೇಶಕ' ಎಂದರೆ ಈ ಅಧಿನಿಯಮದ ಅಡಿಯಲ್ಲಿ ಮಾಡಲಾದ, ನಿಯಮಗಳು ಮತ್ತು ಉಪವಿಧಿಗಳಿಗೆ ಅನುಸಾರವಾಗಿ ಯುಕ್ತವಾಗಿ ಆಯ್ಕೆಯಾದ ಅಥವಾ ನಾಮ ನಿರ್ದೇಶಿತನಾದ ಅಥವಾ ಸಹ–ಸದಸ್ಯನಾಗಿ ಸೇರಿಸಿಕೊಳ್ಳಲಾದ ಮಂಡಲಿಯ ಒಬ್ಬ ಸದಸ್ಯ",

(viii) (ಇ–5) ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಇ–6) 'ಮಹಾ ನಿಕಾಯ (General body) ಎಂದರೆ,

(i) ಪ್ರಾಥಮಿಕ ಸಹಕಾರ ಸಂಘಕ್ಕೆ ಸಂಬಂಧಪಟ್ಟಂತೆ, ಆ ಸಹಕಾರ ಸಂಘದ ಎಲ್ಲ ಸದಸ್ಯರು;

(ii) ಪೂರಕ (Secondary) ಸಹಕಾರ ಸಂಘಗಳಿಗೆ ಸಂಬಂಧಪಟ್ಟಂತೆ, ಸದಸ್ಯ ಸಹಕಾರ ಸಂಘಗಳ ಎಲ್ಲ ಪತ್ರಿನಿಧಿಗಳು ಮತ್ತು ವ್ಯಕ್ತಿಗತ ಸದಸ್ಯರು; ಮತ್ತು

(iii) ಒಕ್ಕೂಟ ಸಹಕಾರ ಸಂಘಗಳಿಗೆ ಸಂಬಂಧಪಟ್ಟಂತೆ, ಸದಸ್ಯ ಸಹಕಾರ ಸಂಘಗಳ ಸದಸ್ಯರ ಎಲ್ಲ ಪ್ರತಿನಿಧಿಗಳು.

(ಇ–7) 'ಮಹಾಸಭೆ' ಎಂದರೆ, ಈ ಅಧಿನಿಯಮದ ಅಡಿಯಲ್ಲಿ ಮತ್ತು ಅದರ ಅಡಿಯಲ್ಲಿ ರಚಿಸಲಾದ ನಿಯಮಗಳು ಮತ್ತು ಸಹಕಾರ ಸಂಘದ ಉಪವಿಧಿಗಳ ಉಪಬಂಧಗಳು ಅನುಸಾರವಾಗಿ ಕರೆಯಲಾದ ಮತ್ತು ನಡೆಸಲಾದ ಮಹಾಸಭೆ'

(ix) (ಜಿ) ಖಂಡದಲ್ಲಿ, "ಉಪಾಧ್ಯಕ್ಷ" ಎಂಬ ಪದದ ತರುವಾಯ" ಚುನಾಯಿತ ಕಾರ್ಯದರ್ಶಿ ಅಥವಾ ಖಜಾಂಚಿ" ಎಂಬ ಪದಗಳನ್ನು ಸೇರಿಸತಕ್ಕದ್ದು.

(x) (ಐ–1) ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಐ–2) 'ಪ್ರತಿನಿಧಿ' ಎಂದರೆ ಪ್ರಾಥಮಿಕ ಸಹಕಾರ ಸಂಘದ ಅಥವಾ ಪೂರಕ ಸಹಕಾರ ಸಂಘದ ವ್ಯಕ್ತಿಗತ ಸದಸ್ಯರ ಒಂದು ಗುಂಪು ತಮ್ಮನ್ನು ಪ್ರತಿನಿಧಿಸಲು ಆಯ್ಕೆಮಾಡಿರುವ ಮತ್ತು ಈ ಅಧಿನಿಯಮ, ನಿಯಮಗಳು ಮತ್ತು ಉಪವಿಧಿಗಳಿಗೆ ಅನುಸಾರವಾಗಿ ಸಂಘದ ಪ್ರತಿನಿಧಿ ಮಹಾ ಸಭೆಯಲ್ಲಿ ಅವರ ಪರವಾಗಿ ಪಾಲ್ಗೊಳ್ಳುವ ಒಬ್ಬ ವ್ಯಕ್ತಿ.

(ಐ–3) 'ಪ್ರತಿನಿಧಿ ಮಹಾಸಭೆ' ಎಂದರೆ, ಪ್ರಾಥಮಿಕ ಸಹಕಾರ ಸಂಘದ ಅಥವಾ ಪೂರಕ ಸಹಕಾರ ಸಂಘದ ಎಲ್ಲ ಪ್ರತಿನಿಧಿಗಳು

(ಐ–4) 'ಪ್ರತಿನಿಧಿ ಮಹಾಸಭೆ' ಎಂದರೆ, ಈ ಅಧಿನಿಯಮ ಅಡಿಯಲ್ಲಿ ರಚಿಸಲಾದ ಈ ಅಧಿನಿಯಮದ ಉಪಬಂಧಗಳು, ನಿಯಮಗಳು ಮತ್ತು ಪ್ರಾಥಮಿಕ ಸಹಕಾರ ಸಂಘದ ಅಥವಾ ಪೂರಕ ಸಹಕಾರ ಸಂಘದ ಉಪವಿಧಿಗಳಿಗೆ ಅನುಸಾರವಾಗಿ ಕರೆಯಲಾದ ಮತ್ತು ನಡೆಸಲಾದ ಪ್ರತಿನಿಧಿಗಳ ಒಂದು ಸಭೆ"

(xi) (ಜೆ–5) ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು ಎಂದರೆ:–

"(ಜೆ–6) 'ರಾಜ್ಯಮಟ್ಟದ ಸಹಕಾರ ಸಂಘ' ಎಂದರೆ, ಯಾವ ಸಹಕಾರ ಸಂಘದ ಕಾರ್ಯ ಪ್ರವರ್ತನೆಯ ಪ್ರದೇಶವು ಇಡೀ ರಾಜ್ಯಕ್ಕೆ ವ್ಯಾಪ್ತವಾಗುವುದೋ ಆ ಸಹಕಾರ ಸಂಘ".

**4. 'ಸಮಿತಿ' ಎಂಬ ಪದಕ್ಕೆ ಪ್ರತಿಯೋಜನೆ.–** ಮೂಲ ಅಧಿನಿಯಮದಲ್ಲಿ, 'ಸಮಿತಿ' ಎಂಬ ಪದಗಳು ಬರುವ ಕಡೆಗಳಲ್ಲೆಲ್ಲಾ ಅವುಗಳಿಗೆ 'ಮಂಡಲಿ' ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು.

**5. 11ಎ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 11ನೇ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"11ಎ– ಉಪವಿಧಿಗಳು.–** (1) ಪ್ರತಿಯೊಂದು ಸಹಕಾರ ಸಂಘವು, ಈ ಅಧಿನಿಯಮದ ಉಪಬಂಧಗಳಿಗೆ ಮತ್ತು ಅದರ ಅಡಿಯಲ್ಲಿ ರಚಿತವಾದ ನಿಯಮಗಳಿಗೆ ಅನುಸಾರವಾಗಿ ತನ್ನ ಉಪವಿಧಿಗಳನ್ನು ರಚಿಸತಕ್ಕದ್ದು.

(2) ಯಾವ ನಿರ್ದಿಷ್ಟ ವಿಷಯಗಳನ್ನು ಅಧಿನಿಯಮ ಅಥವಾ ನಿಯಮಗಳು ಉಪಬಂದಿಸುವುದಲ್ಲವೋ ಮತ್ತು ಉಪವಿದಿಗಳು ಮತ್ತಷ್ಟು ವಿನಿಯಮಿಸಬಹುದಾಗಿದ್ದು, ಆದರೆ ಪ್ರತಿಯೊಂದು ಸಹಕಾರ ಸಂಘದ ಕಾರ್ಯನಿರ್ವಹಣೆಯನ್ನು ಉಲ್ಲಂಘಿಸುವುದಿಲ್ಲವೋ ಆ ನಿರ್ದಿಷ್ಟ ವಿಷಯಗಳನ್ನು ಅದರ ಉಪವಿಧಿಗಳ ಮೂಲಕ ವಿನಿಯಮಿಸತಕ್ಕದ್ದು.

**6. 12ನೇ ಪ್ರಕಣದ ತಿದ್ದುಪಡಿ.–** ಮೂಲ ಅಧಿನಿಯಮದ 12ನೇ ಪ್ರಕರಣದಲ್ಲಿ:–

(i) (1)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1) ಒಂದು ಸಹಕಾರ ಸಂಘವು, ಕಾಲಕಾಲಕ್ಕೆ, ಈ ಅಧಿನಿಯಮ ಮತ್ತು ನಿಯಮಗಳ ಉಪಬಂಧಗಳಿಗೆ ಅನುಸಾರವಾಗಿ ತನ್ನ ಉಪವಿಧಿಗಳನ್ನು ತಿದ್ದುಪಡಿ ಮಾಡಬಹುದು:

ಪರಂತು, ಪ್ರತಿಯೊಂದು ಸಹಕಾರ ಸಂಘವು, ಸದರಿ ತಿದ್ದುಪಡಿಗಳು ಜಾರಿಗೆ ಬರುವ ದಿನಾಂಕದಿಂದ ತೊಂಬತ್ತು ದಿನಗಳ ಒಳಗಾಗಿ ಕಾಲಕಾಲಕ್ಕೆ ಈ ಅಧಿನಿಯಮ ಅಥವಾ ನಿಯಮಗಳಿಗೆ ಮಾಡಲಾದ ತಿದ್ದುಪಡಿಗಳಿಗೆ ಅನುಸಾರವಾಗಿ ತಿದ್ದುಪಡಿಗಳನ್ನು ಮಾಡತಕ್ಕದ್ದು.

(ii) (5) ಮತ್ತು (6)ನೇ ಉಪ ಪ್ರಕರಣಗಳನ್ನು ಬಿಟ್ಟು ಬಿಡತಕ್ಕದ್ದು:

***7. 14* ಎ ಪ್ರಕರಣವನ್ನು ಬಿಟ್ಟುಬಿಡವುದು:** ಮೂಲ ಅಧಿನಿಯಮದ 14ಎ ಪ್ರಕರಣವನ್ನು ಬಿಡತಕ್ಕದ್ದು.

**8. 16ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 16ನೇ ಪ್ರಕರಣದಲ್ಲಿ:–

(i) (1)ನೇ ಉಪ ಪ್ರಕರಣದ (ಎ) ಖಂಡದಲ್ಲಿ, "ಅಂಥ ಸಹಕಾರ ಸಂಘದ ಸೇವೆಗಳ ಅಗತ್ಯವಿರುವ" ಎಂಬ ಪದಗಳ ತರುವಾಯ "ಮತ್ತು ಸಂಘದ ಕಾರ್ಯ ಪ್ರವರ್ತನೆಯ ಪ್ರದೇಶದಲ್ಲಿ ವಾಸವಾಗಿರುವ" ಎಂಬ ಪದಗಳನ್ನು ಸೇರಿಸತಕ್ಕದ್ದು

(ii) (4)ನೇ ಉಪಪ್ರಕರಣದಲ್ಲಿ " ಮೂರು ತಿಂಗಳುಗಳೊಳಗಾಗಿ" ಎಂಬ ಪದಗಳಿಗೆ "ಎರಡು ತಿಂಗಳಗಳೊಳಗಾಗಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(iii) (5), (6) ಮತ್ತು (7)ನೇ ಉಪ ಪ್ರಕರಣಗಳನ್ನು ಬಿಟ್ಟು ಬಿಡತಕ್ಕದ್ದು.

***9. 17* ನೇ ಪ್ರಕರಣದ ತಿದ್ದುಪಡಿ:–** ಮೂಲ ಅಧಿನಿಯಮದ 17ನೇ ಪ್ರಕರಣದ (1)ನೇ ಉಪಪ್ರಕರಣದ (ಡಿ) ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಇ) 16ನೇ ಪ್ರಕರಣದ ಅಡಿಯಲ್ಲಿ ಸದಸ್ಯತ್ವ ಪಡೆಯಲು ಅರ್ಹನಾಗಿಲ್ಲದಿದ್ದರೆ;

(ಎಫ್) ಸಂಘದ ಅಥವಾ ಅದಕ್ಕೆ ಹಣಕಾಸು ಒದಗಿಸುವ ಬ್ಯಾಂಕಿನಿಂದ ಸಂಬಳ ಪಡೆಯುವ ಉದ್ಯೋಗಿಯಾಗಿದ್ದರೆ; ಅಥವಾ

(ಜಿ) ಅಂಥ ಸದಸ್ಯನಾಗಿ, ಉಪವಿಧಿಗಳಲ್ಲಿ ನಿರ್ದಿಷ್ಟ ಪಡಿಸಬಹುದಾದಂತೆ ಅಂಥ ಕನಿಷ್ಠ ವ್ಯವಹಾರವನ್ನು ನಡೆಸಲು ಅಥವಾ ಅಂಥ ಕನಿಷ್ಠ ಸೇವೆಗಳನ್ನು ಅಥವಾ ಸೌಲಭ್ಯಗಳನ್ನು ಬಳಸಿಕೊಳ್ಳಲು ಮೂರು ನಿರಂತರ ವರ್ಷಗಳ ವರೆಗೆ ವಿಫಲನಾದರೆ".

***10. 18* ಎ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 18ಎ ಪ್ರಕರಣದ (ಎ)ಖಂಡದಲ್ಲಿ, (iii) ನೇ ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(iii) ಅನರ್ಹತೆ ಮತ್ತು ಸಮಾಪ್ತಿ"

**11. 19ಎ ಹೊಸ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 19ನೇ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"19ಎ– ಮಾಹಿತಿಯನ್ನು ನೋಡಲು ಅವಕಾಶ:–** ಸಹಕಾರ ಸಂಘದ ಪ್ರತಿಯೊಬ್ಬ ಸದಸ್ಯನು, ಅಂಥ ಸದಸ್ಯನೊಂದಿಗಿನ ತನ್ನ ವ್ಯವಹಾರದ ನಿಯಮ ನಿರ್ವಹಣೆಯ ಸಂಬಂರ್ಧದಲ್ಲಿ ಸಹಕಾರ ಸಂಘದ ಪುಸ್ತಕಗಳು, ಮಾಹಿತಿ ಮತ್ತು ಲೆಕ್ಕಪತ್ರಗಳನ್ನು ನೋಡಲು ಅವಕಾಶ ಹೊಂದಿರತಕ್ಕದ್ದು".

**12. 20ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 20ನೇ ಪ್ರಕರಣದಲ್ಲಿ:–

(i) (1)ನೇ ಉಪ ಪ್ರಕರಣದಲ್ಲಿ "ಯಾವನೇ ಸದಸ್ಯನು..............." ಎಂಬ ಪದಗಳಿಗೆ "ಯಾವನೇ ಸದಸ್ಯನು, ಯಾವನೇ ಪ್ರತಿ ನಿಧಿಯು ಅಥವಾ ಯಾವನೇ ನಿಯೋಗಿಯು ................" ಎಂಬ ಪದಗಳನ್ನು ಪ್ರತಿಯೊಜಿಸತಕ್ಕದ್ದು ಮತ್ತು ಅದರ ಅಡಿಯಲ್ಲಿನ ಪರಂತುಕವನ್ನು ಬಿಟ್ಟಬಿಡತಕ್ಕದ್ದು.

(ii) (2)ನೇ ಉಪಪ್ರಕರಣದಲ್ಲಿ, (ಎ) (iii) ನೇ ಖಂಡದ ಮತ್ತು ಅದರ ಅಡಿಯಲ್ಲಿರುವ ಪರಂತುಕದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:

"(ಎ–iv) ಕಳೆದ ಐದು ಮಹಾಸಭೆಗಳ ಪೈಕಿ ಮೂರು ಮಹಾಸಭೆಗಳಿಗೆ ಹಾಜರಾಗಲು ತಪ್ಪುವ ಒಬ್ಬ ಸದಸ್ಯ, ಒಬ್ಬ ಪ್ರತಿನಿಧಿ ಅಥವಾ ಒಬ್ಬ ನಿಯೋಗಿ.

(ಎ–v) ಮೂರು ನಿರಂತರ ಸಹಕಾರ ವರ್ಷಗಳವರೆಗೆ ಉಪವಿಧಿಗಳಲ್ಲಿ ನಿರ್ದಿಷ್ಟ ಪಡಿಸಬಹುದಾದಂತೆ ಅಂಥ ಕನಿಷ್ಠ ಸೇವೆಗಳನ್ನು ಅಥವಾ ಸೌಲಭ್ಯಗಳನ್ನು ಬಳಸಿಕೊಳ್ಳಲು ತಪ್ಪಿದ ಒಬ್ಬ ಸದಸ್ಯ ಅಥವಾ ಪ್ರತಿನಿಧಿ".

(iii) (2) ನೇ ಉಪ ಪ್ರಕರಣದ (ಬಿ) ಖಂಡದ (iv) ನೇ ಉಪ ಖಂಡದಲ್ಲಿ:–

(ಎ) "ಶೇಕಡಾ ಎಪ್ಪತ್ತೈದಕ್ಕಿಂತ" ಎಂಬ ಪದಗಳಿಗೆ, "ಶೇಕಡಾ ಐವತ್ತಕ್ಕಿಂತ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ಬಿ) (ಎ) ಬಾಬಿನಲ್ಲಿ "ಶೇಕಡಾ ಎಪ್ಪತ್ತೈದರಷ್ಟನ್ನು" ಎಂಬ ಪದಗಳಿಗೆ "ಶೇಕಡಾ ಐವತ್ತರಷ್ಟನ್ನು" ಎಂಬ ಪದಗಳ್ನು ಪ್ರತಿಯೋಜಿಸತಕ್ಕದ್ದು;

**13. 21ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 21ನೇ ಪ್ರಕರಣದ (1)ನೇ ಉಪ ಪ್ರಕರಣದಲ್ಲಿ,

(ಎ) "ಪ್ರತಿಯೊಬ್ಬ ಸದಸ್ಯ" ಎಂಬ ಪದಗಳ ತರುವಾಯ, "ಪ್ರತಿಯೊಬ್ಬ ಪ್ರತಿನಿಧಿ" ಎಂಬ ಪದಗಳು ಮತ್ತು ವಿರಾಮವನ್ನು ಸೇರಿಸತಕ್ಕದ್ದು; ಮತ್ತು

(ಬಿ) ಕೊನೆಯಲ್ಲಿ ಈ ಮುಂದಿನ ವಿವರಣೆಯನ್ನು ಸೇರಿಸತಕ್ಕದ್ದು, ಎಂದರೆ:–

**"ವಿವರಣೆ:–** ಈ ಪ್ರಕರಣದ ಮತ್ತು 20ನೇ ಪ್ರಕರಣದ ಉದ್ದೇಶಗಳಿಗಾಗಿ, "ನಿಯೋಗಿ" ಎಂಬ ಪದವು ಬರುವೆಡೆಯಲ್ಲೆಲ್ಲಾ ಆ ಪದಕ್ಕೆ, ಇತರ ಸಹಕಾರ ಸಂಘಗಳಲ್ಲಿ ಆ ಸಂಘವನ್ನು ಪ್ರತಿನಿಧಿಸುವ ಸಹಕಾರ ಸಂಘದ ಒಬ್ಬ ಸದಸ್ಯ ಎಂದು ಅರ್ಥ"

**14. 26ನೇ ಉಪಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 26ನೇ ಪ್ರಕರಣದಲ್ಲಿ,–

(i) 2ನೇ ಉಪಪ್ರಕರಣದಲ್ಲಿ "ರಿಜಿಸ್ಟ್ರಾರನ್ನು ಸಹಕಾರ ಸಂಘದ ಉಪ ವಿಧಿಗಳನ್ನು ತಿದ್ದುಪಡಿ ಮಾಡಬಹುದು" ಎಂಬ ಪದಗಳಿಗೆ "ಸಹಕಾರ ಸಂಘದ ಮಹಾಸಭೆಯು ಅದರ ಉಪವಿಧಿಗಳನ್ನು ತಿದ್ದುಪಡಿ ಮಾಡಬಹುದು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ii) (3) ಮತ್ತು (4)ನೇ ಉಪ ಪ್ರಕರಣಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(3) (2)ನೇ ಉಪ ಪ್ರಕರಣದ ಅಡಿಯಲ್ಲಿ ಮಾಡಲಾದ ಉಪ ವಿಧಿಗಳ ತಿದ್ದುಪಡಿಗಳನ್ನು (12)ನೇ ಪ್ರಕರಣದ ಅಡಿಯಲ್ಲಿ ಅನುಮೋದನೆಗಾಗಿ ರಿಜಿಸ್ಟ್ರಾರನಿಗೆ ಕಳುಹಿಸತಕ್ಕದ್ದು."

**15. 27ನೇ ಪ್ರಕರಣದ ತಿದ್ದುಪಡಿ.**– ಮೂಲ ಅಧಿನಿಯಮದ 27ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ,

(i) "ಸೆಪ್ಟೆಂಬರ್ ಮೂವತ್ತನೇ ದಿನ" ಎಂಬ ಪದಗಳಿಗೆ "ಸೆಪ್ಟೆಂಬರ್ ಇಪ್ಪತ್ತೈದನೇ ದಿನ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ii) (ಎನ್) ಖಂಡದಲ್ಲಿ, ಕೊನೆಯಲ್ಲಿ ಬರುವ "ಮತ್ತು" ಎಂಬ ಪದವನ್ನು ಬಿಟ್ಟುಬಿಡತಕ್ಕದ್ದು

(iii) (ಎನ್) ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು ಎಂದರೆ:–

"(ಎನ್–1) ಸಂಘದ ಸದಸ್ಯರು ಮತ್ತು ನಿರ್ದೇಶಕರಿಂದ ಸಂಘದ ಸೇವೆಗಳ ಬಳಕೆಯ ಬಗ್ಗೆ ಪರಿಶೀಲನೆ;

(ಎನ್–2) ನಿರ್ದೇಶಕರಿಗೆ ಮತ್ತು ಅವರ ಸಂಬಂಧಿಗಳಿಗೆ ನೀಡಲಾದ ಸಾಲಗಳು ಮತ್ತು ಮುಂಗಡಗಳ ಸುಸ್ಥಿದಾರರು, ಯಾವುದಾದರೂ ಇದ್ದರೆ, ಅವುಗಳ ವಸೂಲಿಗಾಗಿ ಕೈಕೊಂಡ ಕ್ರಮದ ಪರಿಶೀಲನೆ;

(ಎನ್–3) ವಿಚಾರಣಾ ಮತ್ತು ತಪಾಸಣಾ ವರದಿಗಳು, ಯಾವುದಾದರೂ ಇದ್ದರೆ ಅವುಗಳ, ಮತ್ತು ಸದರಿ ವರದಿಗಳಲ್ಲಿ, ಎತ್ತಿ ತೋರಿಸಲಾದ ದೋಷಗಳನ್ನು ಸರಿಪಡಿಸುವ ಮತ್ತು ಅಕ್ರಮಗಳನ್ನು ಪರಿಹರಿಸುವ ಸಂಬಂಧದಲ್ಲಿ ಕೈಕೊಂಡ ಕ್ರಮದ ಬಗ್ಗೆ ಮಂಡಲಿಯ ಅನುಸರಣಾ ವರದಿಯ ಪರಿಶೀಲನೆ;

(ಎನ್–4) ಲೆಕ್ಕಪರಿಶೋದಕರ ನೇಮಕಾತಿ;

(ಎನ್–5) ಆಸ್ತಿಗಳು ಮತ್ತು ಹೊಣೆಗಾರಿಕೆಗಳ ಸ್ವಯಿಚ್ಛಾ ಸಂಯೋಜನೆ, ವಿಭಜನೆ, ವರ್ಗಾವಣೆ;

(ಎನ್–6) ವಸೂಲಿಯಾಗದವನೆಂದು ಪರಿಗಣಿಸಲಾದ ವಸೂಲಾಗದ ಋಣಗಳ ಬಗ್ಗೆ ತೀರ್ಮಾನ;

(ಎನ್–7) ಪದಾಧಿಕಾರಿಗಳೂ ಸೇರಿದಂತೆ ನಿರ್ದೇಶಕರಿಗೆ, ಅವರ ಆ ಸಾಮರ್ಥ್ಯದಲ್ಲಿ ನಿರ್ವಹಿಸಿದ ಕರ್ತವ್ಯಗಳಿಗೆ ಅಥವಾ ಸಂಬಂಧಪಟ್ಟ ಸಭೆಗಳಲ್ಲಿ ಅವರು ಹಾಜರಾದುದಕ್ಕೆ ಸಂಬಂಧಪಟ್ಟಂತೆ ಅವರಿಗೆ ಸಂದಾಯ ಮಾಡಿದ ಸಂಭಾವನೆ, ಪ್ರಯಾಣ ಭತ್ಯೆ, ದಿನ ಭತ್ಯೆ ಮತ್ತು ಇತರ ಭತ್ಯಗಳ ಪರಿಶೀಲನೆ;

(ಎನ್–8) ಮೀಸಲು ಅಥವಾ ಇತರೆ ನಿಧಿಗಳ ವಾಸ್ತವಿಕ ಬಳಕೆಯ ಪರಿಶೀಲನೆ;

(ಎನ್–9) ಸಹಕಾರ ಸಂಘಗಳ ಸಮಾಪನೆ; ಮತ್ತು"

(iv) ಕೊನೆಯಲ್ಲಿ ಬರುವ ಪರಂತುಕವನ್ನು ಬಿಟ್ಟುಬಿಡತಕ್ಕದ್ದು.

(v) (2)ನೇ ಉಪ ಪ್ರಕರಣದ (ಬಿ) ಖಂಡವನ್ನು ಬಿಟ್ಟುಬಿಡತಕ್ಕದ್ದು

(vi) (3)ನೇ ಉಪ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು ಎಂದರೆ:–

(4) ಮಹಾಸಭೆಗೆ ಕೋರಂ ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಿದಂತೆ ಇರತಕ್ಕದ್ದು, ಆದರೆ ಸಭೆಯಲ್ಲಿ ಮತ ನೀಡಲು ಅರ್ಹತೆ ಹೊಂದಿರುವ ಸದಸ್ಯರ ಶೇಕಡಾ ಇಪ್ಪತ್ತಕ್ಕಿಂತ ಕಡಿಮೆ ಇರತಕ್ಕದಲ್ಲ;

ಪರಂತು, ಪ್ರತಿನಿಧಿ ಮಹಾಸಭೆಗಾಗಿನ ಕೋರಂ, ಸಭೆಯಲ್ಲಿ ಮತ ನೀಡಲು ಅರ್ಹತೆಹೊಂದಿರುವ ಪ್ರತಿನಿಧಿಗಳ ಶೇಕಡಾ ಅರವತ್ತಕ್ಕಿಂತ ಕಡಿಮೆ ಇರತಕ್ಕದಲ್ಲ."

**16. 27 ಎ ಮತ್ತು 27 ಬಿ ಪ್ರಕರಣದ ಸೇರ್ಪಡೆ.**– ಮೂಲ ಅಧಿನಿಯಮದ 27ನೇ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"27 ಎ. ವ್ಯವಸ್ಥಾಪನೆಯಲ್ಲಿ ಸದಸ್ಯರು ಪಾಲ್ಗೊಳ್ಳುವುದು.**– ಸಹಕಾರ ಸಂಘದ ಪ್ರತಿಯೊಬ್ಬ ಸದಸ್ಯನು,–

(ಎ) ಹಿಂದಿನ ಐದು ವಾರ್ಷಿಕ ಮಹಾಸಭೆಗಳ ಪೈಕಿ ಮೂರು ಮಹಾಸಭೆಗಳಿಗೆ ಹಾಜರಾಗುವ ಮೂಲಕ;

(ಬಿ) ಉಪವಿಧಿಗಳಲ್ಲಿ ನಿರ್ದಿಷ್ಟ ಪಡಿಸಬಹುದಾದಂತೆ ಸಂಘವು ನೀಡುವಂಥ ಕನಿಷ್ಠ ಸೇವೆಗಳು, ಅಥವಾ ಸೌಲಭ್ಯಗಳನ್ನು ಪ್ರತಿವರ್ಷ ಬಳಿಸಿಕೊಳ್ಳುವ ಮೂಲಕ,

– ಸಂಘದ ವ್ಯವಸ್ಥಾಪನೆಯಲ್ಲಿ ಪಾಲ್ಗೊಳ್ಳತಕ್ಕದ್ದು:

ಪರಂತು ಒಬ್ಬ ಸದಸ್ಯನು ಕನಿಷ್ಠ ಸೇವೆಗಳನ್ನು ಒಳಸಿಕೊಳ್ಳುಲು ತಪ್ಪಿದರೆ ಅಥವಾ ಕನಿಷ್ಠ ಸಂಖ್ಯೆಯ ಸಭೆಗಳಿಗೆ ಹಾಜರಾಗಲು ತಪ್ಪಿದರೆ, ಅವನು, ಮೂರು ವರ್ಷಗಳ ಅವಧಿಯವರೆಗೆ ಮತ ನೀಡುವ ತನ್ನ ಹಕ್ಕನ್ನು ಕಳೆದುಕೊಳ್ಳತಕ್ಕದ್ದು."

**27 ಬಿ. ರಿಜಿಸ್ಟ್ರಾರನಲ್ಲಿ ವಿವರ ಪಟ್ಟಿಕೆಗಳನ್ನು ಸಲ್ಲಿಸುವುದು.**– ಪ್ರತಿಯೊಂದು ಸಹಕಾರ ಸಂಘದ ಮಂಡಲಿಯು ಈ ಕೆಳಕಂಡ ವಿವರ ಪಟ್ಟಿಕೆಗಳನ್ನು ರಿಜಿಸ್ಟ್ರಾರನಿಗೆ, ಪ್ರತಿಯೊಂದು ಸಹಕಾರ ವರ್ಷದ ಮುಕ್ತಾಯದ ಆರು ತಿಂಗಳೊಳಗಾಗಿ,

(ಎ) ಸಂಘದ ಚಟುವಟಿಕೆಗಳ ವಾರ್ಷಿಕ ವರದಿಯನ್ನು;

(ಬಿ) ಲೆಕ್ಕಪತ್ರಗಳ ಪರಿಶೋಧಿತ ವಿವರ ಪತ್ರಗಳನ್ನು;

(ಸಿ) ಮಹಾಸಭೆಯು ಅನುಮೋದಿಸದಂಥ ಹೆಚ್ಚುವರಿ ಆದಾಯದ ವಿಲೇವಾರಿಗಾಗಿ ಯೋಜನೆಯನ್ನು;

(ಡಿ) ಸಹಕಾರ ಸಂಘದ ಮಹಾಸಭೆಯು ಅನುಮೋದಿಸಿರುವಂಥ, ಉಪವಿಧಿಯ ತಿದ್ದುಪಡಿಗಳ ಪಟ್ಟಿಯನ್ನು;

(ಇ) ಮಹಾಸಭೆಯನ್ನು ನಡೆಸುವ ದಿನಾಂಕದ ಬಗ್ಗೆ ಮತ್ತು ಚುನಾವಣೆಗಳು ಬಾಕಿ ಇದ್ದಲ್ಲಿ ಅವುಗಳನ್ನು ನಡೆಸುವ ಬಗ್ಗೆ ಘೋಷಣೆಯನ್ನು;

(ಎಫ್) ಹಣದ ದುರುಪಯೋಗ ಅಥವಾ ದುರ್ವಿನಿಯೋಗ, ಯಾವುದಾದರೂ ಇದ್ದರೆ, ಅದು ಮತ್ತು ಸಿವಿಲ್, ಕ್ರಿಮಿನಲ್ ಮತ್ತು ಶಿಸ್ತು ಕ್ರಮಗಳು ಸೇರಿದಂತೆ ಆ ಸಂಬಂಧದಲ್ಲಿ ಜವಾಬ್ದಾರರಾಗಿರುವ ವ್ಯಕ್ತಿಗಳ ವಿರುದ್ಧ ಕೈಗೊಂಡ ಕ್ರಮವನ್ನು ಮತ್ತು;

(ಜಿ) ಅಧಿನಿಯಮದ ಯಾವುದೇ ಉಪಬಂಧಗಳಿಗೆ ಅನುಸಾರವಾಗಿ ರಿಜಿಸ್ಟ್ರಾರನು ಅಗತ್ಯಪಡಿಸಿದ ಯಾವುದೇ ಇತರ ಮಾಹಿತಿಯನ್ನು;

– ಸಲ್ಲಿಸತಕ್ಕದ್ದು.

**17. 28ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 28ನೇ ಪ್ರಕರಣದ (1)ನೇ ಉಪ ಪ್ರಕರಣದಲ್ಲಿ "ಐವತ್ತು ಸದಸ್ಯರಿಂದ ಅಥವಾ," ಮತ್ತು " ಇದರಲ್ಲಿ ಯಾವುದು ಕಡಿಮೆಯೋ ಅಷ್ಟು," ಎಂಬ ಪದಗಳನ್ನು ಮತ್ತು ಅಲ್ಪವಿರಾಮವನ್ನು ಬಿಟ್ಟು ಬಿಡತಕ್ಕದ್ದು.

**18. 28ಎ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 28ಎ ಪ್ರಕರಣದಲ್ಲಿ,

(i) (2) ನೇ ಉಪ ಪ್ರಕರಣದಲ್ಲಿ,

(ಎ) "ಸರ್ಕಾರದಿಂದ ನಾಮ ನಿರ್ದೇಶಿತರಾದ ವ್ಯಕ್ತಿಗಳು ಮತ್ತು" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು;

(ಬಿ) (i) ನೇ ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು; ಎಂದರೆ:–

"(i) ಪ್ರಾಥಮಿಕ ಸಂಘದ ಮತ್ತು ಸೆಕೆಂಡರಿ ಸಂಘದ ಕಾರ್ಯಾಚರಣೆ ಪ್ರದೇಶ ವ್ಯಾಪ್ತಿಯು,–

(ಎ) ತಾಲ್ಲೂಕಿನ ಒಂದು ಭಾಗಕ್ಕೆ ವ್ಯಾಪಿಸಿದ್ದರೆ, ಹನ್ನೊಂದು ಜನ ಸದಸ್ಯರು;

(ಬಿ) ಇಡೀ ತಾಲ್ಲೂಕಿಗೆ ವ್ಯಾಪಿಸಿದ್ದರೆ, ಹದಿಮೂರು ಜನ ಸದಸ್ಯರು;

(ಸಿ) ತಾಲ್ಲೂಕನ್ನು ಮೀರಿದ ಆದರೆ ಜಿಲ್ಲೆಯನ್ನು ಮೀರದ ಪ್ರದೇಶಕ್ಕೆ ವ್ಯಾಪಿಸಿದರೆ, ಹದಿನೈದು ಜನ ಸದಸ್ಯರು:

ಪರಂತು, ಒಂದು ಜಿಲ್ಲೆಯನ್ನು ಮೀರದ ಪ್ರವರ್ತನಾ ಪ್ರದೇಶವನ್ನು ಹೊಂದಿರುವ ನಗರ ಸಹಕಾರ ಬ್ಯಾಂಕಿನ ಸಂದರ್ಭದಲ್ಲಿ, ಗರಿಷ್ಠ ಸಂಖ್ಯೆಯು ಹದಿನೇಳು ಸದಸ್ಯರನ್ನು ಮೀರತಕ್ಕದ್ದಲ್ಲ.

(ಡಿ) ಜಿಲ್ಲೆಯನ್ನು ಮೀರಿ ವ್ಯಾಪಿಸಿದ್ದರೆ, ಹತ್ತೊಂಭತ್ತು ಸದಸ್ಯರು"

(ಸಿ) "(ii) ನೇ ಖಂಡದಲ್ಲಿ "ಹೊರತುಪಡಿಸಿ" "ಎಂಬ ಪದಕ್ಕೆ "ಒಳಗೊಂಡ" ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು.

(ಡಿ) (iii) ನೇ ಖಂಡವನ್ನು ಬಿಟ್ಟುಬಿಡತಕ್ಕದ್ದು.

(ii) (3) ನೇ ಉಪ ಪ್ರಕರಣದಲ್ಲಿ,–

(ಎ) "ಪ್ರತಿ ಪ್ರಾಥಮಿಕ ಸಂಘದ" ಎಂಬ ಪದಗಳಿಗೆ "ಪ್ರತಿ ಸಹಕಾರ ಸಂಘದ" ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ಬಿ) (ii) ನೇ ಖಂಡದಲ್ಲಿ "ಒಂದು ಸ್ಥಾನವನ್ನು" ಎಂಬ ಪದಗಳಿಗೆ "ಎರಡು ಸ್ಥಾನಗಳನ್ನು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ಸಿ) (ii) ನೇ ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು ಎಂದರೆ:–

"(iii) ಒಂದು ಸ್ಥಾನವನ್ನು ಹಿಂದುಳಿದ ವರ್ಗಗಳಿಗೆ ಸೇರಿದ ವ್ಯಕ್ತಿಗಳು ಪರವಾಗಿ ಚುನಾವಣೆಯ ಮೂಲಕ ಭರ್ತಿ ಮಾಡುವುದಕ್ಕಾಗಿ;

ಪರಂತು, ವ್ಯಕ್ತಿಗಳನ್ನು ಸದಸ್ಯರನ್ನಾಗಿ ಒಳಗೊಂಡಿರುವ ಮತ್ತು ವ್ಯಕ್ತಿಗಳ ಅಂಥ ವರ್ಷ ಅಥವಾ ಪ್ರವರ್ಗದಿಂದ ಸದಸ್ಯರನ್ನು ಹೊಂದಿರುವ ಪ್ರತಿಯೊಂದು ಸಹಕಾರ ಸಂಘದ ಮಂಡಳಿಯಲ್ಲಿ ಅಂಥ ಮೀಸಲಾತಿಯನ್ನು ಮಾಡತಕ್ಕದ್ದು."

(iii) (4)ನೇ ಉಪ ಪ್ರಕರಣದಲ್ಲಿ,–

(ಎ) "ಐದು ಸಹಕಾರ ವರ್ಷಗಳಾಗಿರತಕ್ಕದ್ದು" ಎಂಬ ಪದಗಳಿಗೆ "ಚುನಾವಣೆಯ ದಿನಾಂಕದಿಂದ ಐದು ವರ್ಷಗಳಾಗಿರತಕ್ಕದ್ದು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ಬಿ) ಮೊದಲ ಪರಂತುಕದ ತುರವಾಯ ಇರುವ ವಿವರಣೆಯನ್ನು ಬಿಟ್ಟುಬಿಡತಕ್ಕದ್ದು.

(ಸಿ) ಎರಡನೇ ಮತ್ತು ಮೂರನೇ ಪರಂತುಗಳಲ್ಲಿ "ಐದು ಸಹಕಾರ ವರ್ಷಗಳಾಗಿರತಕ್ಕದ್ದು" ಎಂಬ ಪದಗಳಿಗೆ "ಚುನಾವಣೆಯ ದಿನಾಂಕದಿಂದ ಐದು ವರ್ಷಗಳಾಗಿರತಕ್ಕದ್ದು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(iv) (4)ನೇ ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(4ಎ) ಸಹಕಾರಿ ಸಂಘಗಳ ಮಂಡಳಿಯು, ಬ್ಯಾಂಕಿಂಗ್, ವ್ಯವಸ್ಥಾಪನೆ, ಹಣಕಾಸು ಕ್ಷೇತ್ರಗಳಲ್ಲಿ ಅನುಭವವನ್ನು ಹೊಂದಿರುವವರನ್ನು ಸಹ ಸದಸ್ಯರನ್ನಾಗಿ ನೇಮಕ ಮಾಡಿಕೊಳ್ಳಬಹುದು ಅಥವಾ ಸಹಕಾರ ಸಂಘವು ಕೈಗೊಳ್ಳಬೇಕಾದ ಉದ್ದೇಶಗಳು ಮತ್ತು ಚಟುವಟಿಕೆಗಳಿಗೆ ಸಂಬಂಧಿಸಿದ ಯಾವುದೇ ಇತರ ಕ್ಷೇತ್ರದಲ್ಲಿ ಪರಿಣತಿಯನ್ನು ಹೊಂದಿರುವ ವ್ಯಕ್ತಿಗಳು ಸದಸ್ಯರಾಗಿರಬೇಕು;

ಪರಂತು, ಹಾಗೆ ಸಹ ಸದಸ್ಯರನ್ನಾಗಿ ನೇಮಕ ಮಾಡಿಕೊಂಡು ಸದಸ್ಯರ ಸಂಖ್ಯೆಯು (2)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಗರಿಷ್ಠ ಸಂಖ್ಯೆಗೆ ಹೆಚ್ಚುವರಿಯಾಗಿ ಇಬ್ಬರನ್ನು ಮೀರತಕ್ಕದಲ್ಲ:

ಮತ್ತು ಪರಂತು, ಹಾಗೆ ಸಹ ಸದಸ್ಯರಾದಂಥವರು, ಅಂಥ ಸದಸ್ಯರಾಗಿ ಅವರ ಸಾಮರ್ಥ್ಯದಲ್ಲಿ ಸಹಕಾರಿ ಸಂಘಗಳ ಯಾವುದೇ ಚುನಾವಣೆಯಲ್ಲಿ ಮತದಾನ ಮಾಡುವ ಹಕ್ಕನ್ನು ಹೊಂದಿರತಕ್ಕದ್ದಲ್ಲ ಅಥವಾ ಮಂಡಳಿಯ ಪದಾಧಿಕಾರಿಗಳಾಗಿ ಚುನಾಯಿತರಾಗಲು ಅರ್ಹರಾಗಿರತಕ್ಕದ್ದಲ್ಲ:

ಅಲ್ಲದೆ ಪರಂತು ಮೂವರು ಸದಸ್ಯರನ್ನು ಮೀರದ ಕಾರ್ಯನಿರ್ವಹಣಾ ನಿರ್ದೇಶಕರುಗಳು ಉಪವಿಧಿಗಳಿಗನುಸಾರವಾಗಿ ಮಂಡಳಿಯ ಸದಸ್ಯರಾಗಿರತಕ್ಕದ್ದು ಮತ್ತು ಅಂಥ ಸದಸ್ಯರುಗಳನ್ನು, (2)ನೇ ಉಪ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ನಿರ್ದೇಶಕರುಗಳ ಒಟ್ಟು ಸಂಖ್ಯೆಯ ಉದ್ದೇಶಕ್ಕಾಗಿ ಹೊರತುಪಡಿಸತಕ್ಕದ್ದು.

ಅಲ್ಲದೆ ಪರಂತು, ವೃತ್ತಿಪರ ನಿರ್ದೇಶಕರುಗಳು ಮತ್ತು ಕಾರ್ಯನಿರ್ವಹಣಾ ನಿರ್ದೇಶಕರುಗಳು, ಮಂಡಳಿಯ ಸಭೆಗಳನ್ನು ನಡೆಸುವ ಕೋರಂನ (ಗಣಪೂರ್ತಿಯ) ಭಾಗವಾಗಿರತಕ್ಕದ್ದಲ್ಲ.

(4ಬಿ)–(1) ರಾಜ್ಯ ಸರ್ಕಾರವು, ಪ್ರಾಥಮಿಕ ಕೃಷಿ ಸಾಲ ಸಹಕಾರ ಸಂಘದ ಮಂಡಳಿಯನ್ನು ಹೊರತು ಪಡಿಸಿದ ಪ್ರತಿಯೊಂದು ಸಹಾಯಕ ಸಂಘದ ಮಂಡಳಿಯ ಪ್ರತಿನಿಧಿಯಂತೆ ಒಬ್ಬ ವ್ಯಕ್ತಿಯನ್ನು ನಾಮನಿರ್ದೇಶಿಸಬಹುದು:

ಪರಂತು, ಸಹಕಾರ ಸಂಘದ ಸದಸ್ಯನಾಗಿ ನಾಮ ನಿರ್ದೇಶಿತನಾದ ವ್ಯಕ್ತಿಯು, ರಾಜ್ಯ ಸರ್ಕಾರದ ಇಚ್ಛೆಗೊಳಪಟ್ಟು ಅಂಥ ಸದಸ್ಯನಾಗಿ ಪದವನ್ನು ಹೊಂದಿರತಕ್ಕದ್ದು.

(2) ಸರ್ಕಾರದ ಅಧಿಕಾರಿಯು (1)ನೇ ಖಂಡದಡಿಯಲ್ಲಿ ನಾಮನಿರ್ದೇಶಿತನಾದಲ್ಲಿ, ಅಂಥ ಅಧಿಕಾರಿಯು, ಮಂಡಳಿಯ ಯಾವುದೇ ಸಭೆಯಲ್ಲಿ ಸ್ವತ: ಹಾಜರಾಗಲು ಅಸಮರ್ಥನಾದಲ್ಲಿ, ತನ್ನ ಅಧೀನ ಅಧಿಕಾರಿಯಲ್ಲಿ, ಆತನ ಪ್ರತಿನಿಧಿಯಾಗಿ ಸಭೆಯಲ್ಲಿ ಹಾಜರಾಗಲು ನಿಯೋಜಿಸಬಹುದು ಮತ್ತು ಅಂಥ ಅಧೀನ ಅಧಿಕಾರಿಯನ್ನು ಅಂಥ ಸಭೆಯ ಉದ್ದೇಶಕ್ಕಾಗಿ ರಾಜ್ಯ ಸರ್ಕಾರದ ಪ್ರತಿನಿಧಿಯಂತೆ ನಾಮ ನಿರ್ದೇಶಿಸಿದ ವ್ಯಕ್ತಿಯೆಂದೇ ಭಾವಿಸತಕ್ಕದ್ದು"

**19. 28 ಬಿ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 28ಬಿ ಪ್ರಕಣದಲ್ಲಿ, (1)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(1) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಮಂಡಳಿಯ ಚುನಾವಣೆಯನ್ನು, ಹೊರ ಹೋಗುತ್ತಿರುವ ಮಂಡಳಿಯ ಸದಸ್ಯರ ಪದಾವಧಿಯು ಮೀರಿದ ಕೂಡಲೇ ಮಂಡಳಿಯ ಹೊಸ ಚುನಾಯಿತ ಸದಸ್ಯರು ಪದವನ್ನು ಸ್ವೀಕರಿಸಿದರೆಂಬುದನ್ನು ಸುನಿಶ್ಚಿತಗೊಳಿಸುವ ಹಾಗೆ ಮಂಡಳಿಯ ಪದಾವಧಿಯು ಮೀರುವ ಮೊದಲು ನಡೆಸತಕ್ಕದ್ದು."

**20. 28 ಸಿ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 28ಬಿ ಪಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"**28ಸಿ. ಮಂಡಳಿಯ ಅಧಿಕಾರಗಳು ಮತ್ತು ಪ್ರಕಾರ್ಯಗಳು.–** (1) ಸಹಕಾರ ಸಂಘಗಳ ಮಂಡಲಿಯು, ಅಧಿನಿಯಮ, ನಿಯಮಗಳು ಮತ್ತು ಉಪವಿಧಿಗಳಡಿಯಲ್ಲಿ ತನ್ನಪ್ರಕಾರ್ಯಗಳನ್ನು ನಿರ್ವಹಿಸುವ ಉದ್ದೇಶಕ್ಕಾಗಿ ಅವಶ್ಯಕ ಅಥವಾ ವಿಹಿತವಾಗಬಹುದಾದಂಥ ಎಲ್ಲಾ ಅಧಿಕಾರಗಳನ್ನು ಚಲಾಯಿಸತಕ್ಕದ್ದು ಮತ್ತು ಎಲ್ಲಾ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು.

**(2)** ಹಿಂದೆ ಹೇಳಿದ ಅಧಿಕಾರಗಳ ಸಾಮಾನ್ಯಾನ್ವಯಕ್ಕೆ ಭಾದಕವಾಗದಂತೆ, ಅಂಥ ಅಧಿಕಾರಗಳು ಮತ್ತು ಕರ್ತವ್ಯಗಳು ಈ ಮುಂದಿನವುಗಳನ್ನು ಒಳಗೊಂಡಿರತಕ್ಕದ್ದು:–

(ಎ) ಸದಸ್ಯರನ್ನು ಸೇರಿಸಿಕೊಳ್ಳುವುದು;

(ಬಿ) ಷೇರುಗಳ ಹಂಚಿಕೆಗೆ ಸಂಬಂಧಿಸಿದ ಅರ್ಜಿಗಳನ್ನು ವಿಲೆ ಮಾಡಬಹುದು;

(ಸಿ) ಸಂಪನ್ಮೂಲಗಳ ಕ್ರೋಡೀಕರಿಸುವುದು ಮತ್ತು ನಿಧಿಗಳನ್ನು ವಿಧಿಸುವುದು;

(ಡಿ) ಸದಸ್ಯರಿಗೆ ಸಾಲಗಳು ಮತ್ತು ಮುಂಗಡಗಳ ಮಂಜೂರಾತಿಯನ್ನು ಒಳಗೊಂಡಂತೆ ಸೇವೆಗಳು ಅಥವಾ ಸೌಲಭ್ಯಗಳನ್ನು ಒದಗಿಸುವುದು ಮತ್ತು ಕೈಗೊಳ್ಳಬೇಕಾದ ಸೌಲಭ್ಯಗಳನ್ನು ನಿರ್ಧರಿಸುವುದು;

(ಇ) ಅಧ್ಯಕ್ಷರು ಮತ್ತು ಅಂಥ ಇತರ ಪದಾಧಿಕಾರಿಗಳನ್ನು ಚುನಾಯಿಸುವುದು;

(ಎಫ್) ಸಂಘದ ಉದ್ದೇಶಗಳನ್ನು ಸಾಧಿಸಲು ಅಗತ್ಯಪಡಿಸಿದ ಚರ ಮತ್ತು ಸ್ಥಿರ ಸ್ವತ್ತನ್ನು ಅರ್ಜಿಸಿಕೊಳ್ಳವುದು ಅಥವಾ ವಿಲೆ ಮಾಡುವುದು;

(ಜಿ) ಸಂಘದ ಸಿಬ್ಬಂದಿಯ ವೃಂದಬಲ, ಪ್ರತಿ ಉದ್ಯೋಗಿಗೆ ಅರ್ಹತೆಗಳು, ವೇತನ ಶ್ರೇಣಿ ಮತ್ತು ಅಂಗೀಕಾರಾರ್ಹವಾದ ಇತರೆ ಭತ್ಯೆಗಳನ್ನು ನಿರ್ಧರಿಸುವುದು;

(ಹೆಚ್) 29ಜಿ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು ಸಂಘದ ಮುಖ್ಯ ಕಾರ್ಯನಿರ್ವಾಹಕರು ನೇಮಕ ಮಾಡಿಕೊಳ್ಳಲು ಅಗತ್ಯಪಡಿಸದಂಥ ಮುಖ್ಯ ಕಾರ್ಯನಿರ್ವಾಹಕ ಮತ್ತು ಅಂಥ ಇತರೆ ಉದ್ಯೋಗಿಗಳನ್ನು ನೇಮಕ ಮಾಡಿಕೊಳ್ಳುವುದು;

(ಐ) ಕರ್ತವ್ಯಚ್ಯುತ ಉದ್ಯೋಗಿಗಳ ವಿರುದ್ಧ ನಡತೆ ಮತ್ತು ಶಿಸ್ತು ನಿಯಮಗಳನ್ನು ನಿರೂಪಿಸುವುದು, ಉಪವಿಧಿಗಳ ಉಪಬಂಧಗಳಿಗೆ ಒಳಪಟ್ಟು ಆರೋಪಗಳ ಗಂಭೀರತೆಯ ಪ್ರಮಾಣಕ್ಕನುಸಾರವಾಗಿ ದಂಡಗಳನ್ನು ವಿಧಿಸುವುದು;

(ಜೆ) ಸಾಂಸ್ಥಿಕ ಉದ್ದೇಶಗಳನ್ನು ಸಾಧಿಸಲು ನಿರ್ದಿಷ್ಟ ಗುರಿಗಳನ್ನು ರೂಪಿಸಿಕೊಳ್ಳುವುದು;

(ಕೆ) ವಾರ್ಷಿಕ ಆಯವ್ಯಯಗಳ ಉಪಬಂಧಗಳಿಗೆ ಒಳಪಟ್ಟು ಸಂಘದ ವ್ಯವಹಾರಗಳಿಗೆ ಅವಶ್ಯಕವಾದ ವೆಚ್ಚವನ್ನು ಅನುಮೋದಿಸುವುದು;

(ಎಲ್) ನಿರ್ದಿಷ್ಟ ಕಾಲಮಿತಿಯೊಳಗೆ ಸಂಘದ ಲೆಕ್ಕಪತ್ರಗಳನ್ನು ಲೆಕ್ಕಪರಿಶೋಧಿನೆಯನ್ನು ಮಾಡುವುದು ಮತ್ತು ಸದರಿ ಅವಧಿಯೊಳಗೆ ಲೆಕ್ಕಪರಿಶೋಧನಾ ವರದಿಯನ್ನು ಪಡೆಯುವುದು;

(ಎಂ) ಲೆಕ್ಕಪರಿಶೋಧನಾ ವರದಿಯನ್ನು ಪರಿಗಣಿಸುವುದು, ಲೆಕ್ಕಪರಿಶೋಧನೆಯಲ್ಲಿ ಪತ್ತೆಹಚ್ಚಿದ ಯಾವುದೇ ದೋಷಗಳನ್ನು ಸರಿಪಡಿಸಲು ಮತ್ತು ಯಾವುದೇ ಅಕ್ರಮಗಳಿಗೆ ಪರಿಹಾರವನ್ನು ಕಂಡು ಕೊಳ್ಳಲು ಕ್ರಮ ಕೈಗೊಳ್ಳುವುದು, ಪಾಲನಾ ವರದಿಯನ್ನು ಸಲ್ಲಿಸುವುದು ಮತ್ತು ಮಹಾಸಭೆಯ ಮುಂದೆ ವರದಿಗಳನ್ನು ಮಂಡಿಸುವುದು;

(ಎನ್) ವಿಚಾರಣಾ ಅಥವಾ ಪರಿಶೀಲನಾ ವರದಿಗಳನ್ನು ಪರಿಗಣಿಸುವುದು, ವಿಚಾರಣೆ ಅಥವಾ ಪರಿಶೀಲನೆಯನ್ನು ಪತ್ತೆಹಚ್ಚಲಾದ ಯಾವುದೇ ಅಕ್ರಮಗಳಿಗೆ ಕ್ರಮಕೈಗೊಳ್ಳುವುದು, ಮಹಾಸಭೆಯ ಮುಂದೆ ವರದಿಗಳನ್ನು ಮಂಡಿಸುವುದು;

(ಒ) ಮಹಾಸಭೆಯ ಅನುಮೋದನೆಗೆ ವಾರ್ಷಿಕ ವರದಿ, ವಾರ್ಷಿಕ ಹಣಕಾಸು ವಿವರಪಟ್ಟಿಗಳು, ವಾರ್ಷಿಕ ಯೋಜನೆ ಮತ್ತು ಆಯವ್ಯಯವನ್ನು ಮಂಡಿಸುವುದು;

(ಪಿ) ಕಾನೂನು ವ್ಯವಹರಣೆಗಳನ್ನು ಪ್ರಾರಂಭಿಸುವುದು, ಸಮರ್ಥಿಸುವುದು ಅಥವಾ ರಾಜಿ ಮಾಡಿಕೊಳ್ಳುವುದು;

(ಕ್ಯೂ) ಸಂಘದ ಹಣವನ್ನು ದುರ್ವಿನಿಯೋಗ ಮಾಡುವ ಮೂಲಕ ಅಥವಾ ಸಂಘಕ್ಕೆ ನಷ್ಟವುಂಟುಮಾಡುವ ಮೂಲಕ ಸೀಮಿತ ಅಥವಾ ಕ್ರಿಮಿನಲ್ ಹೊಣೆಗಾರಿಕೆಗೆ ಗುರಿಯಾಗಿರುವಂಥ ಯಾರೇ ವ್ಯಕ್ತಿಯ ವಿರುದ್ಧ ಸಂದರ್ಭಾನುಸಾರ ಸೀಮಿತ, ಕ್ರಿಮಿನಲ್ ಮತ್ತು ಶಿಸ್ತು ಕ್ರಮವನ್ನು ಪ್ರಾರಂಭಿಸುವುದು;

(ಆರ್) ಸಕಾಲದಲ್ಲಿ ಅವಶ್ಯಕವಾದಾಗಲೆಲ್ಲಾ ಮತ್ತು ಕೋರಿಕೆಯ ಮೇರೆಗೆ ವಿಶೇಷ ಸಾಮಾನ್ಯ ಸಭೆಗಳನ್ನು ನಡೆಸುವುದು;

(ಎಸ್) ಸಂಘದ ಸರಿಯಾದ ಮತ್ತು ಪರಿಣಾಮಕಾರಿ ಕಾರ್ಯನಿರ್ವಹಣೆಗಾಗಿ ಅವಶ್ಯಕ ವಿನಿಯಮಗಳನ್ನು ರಚಿಸುವುದು;

(ಟಿ) ಈ ಅಧಿನಿಯಮ, ನಿಯಮಗಳಡಿಯಲ್ಲಿ ಅಗತ್ಯ ಪಡಿಸಬಹುದಾದಂಥ ಅಥವಾ ಉಪವಿಧಿಗಳಲ್ಲಿ ನಿರ್ದಿಷ್ಟ ಪಡಿಸಬಹುದಾದಂತ ಅಥವಾ ಸಾಮಾನ್ಯ ಸಭೆಯು ಪ್ರತ್ಯಾಯೋಜಿಸಬಹುದಾದಂಥ ಇತರೆ ಕ್ರಮಗಳನ್ನು ಕೈಗೊಳ್ಳುವುದು ಮತ್ತು ಅಂಥ ಇತರೆ ಕಾರ್ಯಗಳನ್ನು ಮಾಡುವುದು.

**21. 29ನೇ ಪ್ರಕರಣವನ್ನು ಬಿಟ್ಟುಬಿಡುವುದು.–** ಮೂಲ ಅಧಿನಿಯಮದ 29ನೇ ಪ್ರಕಣವನ್ನು ಬಿಟ್ಟಿಬಿಡತಕ್ಕದ್ದು.

**22. 29 ಸಿ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 29ಸಿ ಪ್ರಕರಣದಲ್ಲಿ

(i) (1) ನೇ ಉಪ ಪ್ರಕರಣದಲ್ಲಿ:–

(ಎ) (ಸಿ) ಖಂಡದಲ್ಲಿ, "ಅಥವಾ ಅವನ ಹತ್ತಿರದ ಸಂಬಂಧಿಯು" ಎಂಬ ಪದಗಳನ್ನು ಮತ್ತು ಕೊನೆಯಲ್ಲಿ ಇರುವ ಪರಂತುಕವನ್ನು ಬಿಟ್ಟು ಬಿಡತಕ್ಕದ್ದು;

(ಬಿ) (ಎಫ್) ಖಂಡದಲ್ಲಿ, ವಿವರಣೆಯಲ್ಲಿ, "ಮತ್ತು (ಸಿ) ಖಂಡದ" ಎಂಬ ಪದಗಳನ್ನು ಬಿಟ್ಟು ಬಿಡತಕ್ಕದ್ದು.

(ಸಿ) (ಒ) ಖಂಡದಲ್ಲಿ (i) ನೇ ಉಪ ಖಂಡದಲ್ಲಿ "ಸದಸ್ಯ" ಎಂಬ ಪದಕ್ಕೆ "ನಿರ್ದೇಶಕ" ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು.

(ಡಿ) (ಓ) ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಪಿ) ಅವನು ಗೈರುಹಾಜರಾಗಲು ಅನುಮತಿ ಪಡೆಯದೆ ಅಂಥ ಸಂಘದ ಮಂಡಲಿಯ ಮೂರು ನಿರಂತರ ಸಭೆಗಳಿಗೆ ಗೈರುಹಾಜರಾದರೆ"

(ii) (2) ನೇ ಉಪ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(3) ಸಹಕಾರ ಸಂಘದ ಮಂಡಳಿಯು–

(ಎ) 39 ಎ ಪ್ರಕರಣ ಮತ್ತು 29 ಎಫ್ ಪ್ರಕರಣದ ಪ್ರಕಾರ ಚುನಾವಣೆಗಳನ್ನು ನಡೆಸಲು ಸಹಕಾರಿ ಚುನಾವಣಾ ಆಯೋಗಕ್ಕೆ ನೆರವಾಗಲು ವಿಫಲವಾದರೆ; ಅಥವಾ

(ಬಿ) 27ನೇ ಪ್ರಕರಣದ ಅಡಿಯಲ್ಲಿ ವಾರ್ಷಿಕ ಮಹಾಸಭೆಯನ್ನು ಅಥವಾ ಅಗತ್ಯವಾಗಿರುವಾಗ 28ನೇ ಪ್ರಕರಣದ ಅಡಿಯಲ್ಲಿ ವಿಶೇಷ ಮಹಾಸಭೆಯನ್ನು ಕರೆಯಲು ವಿಫಲವಾದರೆ; ಅಥವಾ

(ಸಿ) ವಾರ್ಷಿಕ ಮಹಾಸಭೆಯಲ್ಲಿ ಪರಿಶೋಧಿತ ಲೆಕ್ಕಪತ್ರಗಳನ್ನು ಮತ್ತು ವಾರ್ಷಿಕ ಮರದಿಯನ್ನು ಮಂಡಿಸಲು ವಿಫಲವಾದರೆ,

– ಹಾಗೆ ವಿಫಲವಾದ ಮಂಡಲಿಯ ಪ್ರತಿಯೊಬ್ಬ ಸದಸ್ಯನು, ಅನರ್ಹತೆಯ ಆದೇಶದ ದಿನಾಂಕದಿಂದ ಐದು ವರ್ಷಗಳ ಅವಧಿಯವರೆಗೆ ಸಂಘದ ಮಂಡಲಿಯ ಸದಸ್ಯನಾಗಿ ಚುನಾಯಿತನಾಗಿರಲು, ಅಥವಾ ನೇಮಕಗೊಳ್ಳಲು ಅಥವಾ ಮುಂದುವರೆಯಲು ಅನರ್ಹನಾಗತಕ್ಕದ್ದು"

(iii) (9)ನೇ ಉಪ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು ಎಂದರೆ:–

"(10) ಸಹಕಾರ ಸಂಘದ ಯಾವೊಬ್ಬ ನಿರ್ದೇಶಕನು, (1)ನೇ ಉಪ ಪ್ರಕರಣದಲ್ಲಿ ಹೇಳಲಾದ ಯಾವುದೇ ಅನರ್ಹತೆಗೆ ಗುರಿಯಾದರೆ, ಅವನು ಇನ್ನೊಂದು ಸಂಘದ ನಿಯೋಗಿಯಾಗಿ ಚುನಾಯಿತನಾಗಿರಲು ಅರ್ಹನಾಗತಕ್ಕದ್ದಲ್ಲ. (8)ನೇ ಉಪ ಪ್ರಕರಣದ ಉಪಬಂಧಗಳು ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕದ್ದು.

(11) ಒಂದು ಸಹಕಾರ ಸಂಘದ ಯಾವೊಬ್ಬ ಸದಸ್ಯನು (1)ನೇ ಉಪ ಪ್ರಕರಣದ (ಎಂ) ಮತ್ತು (ಎನ್) ಖಂಡಗಳನ್ನು ಹೊರತುಪಡಿಸಿ, ಸದರಿ ಉಪ ಪ್ರಕರಣದಲ್ಲಿ ಹೇಳಲಾದ ಯಾವುದೇ ಅನರ್ಹತೆಗೆ ಗುರಿಯಾಗಿದ್ದರೆ, ಅವನು, ಪ್ರತಿನಿಧಿಯಾಗಿ ಚುನಾಯಿತನಾಗಲು ಅಥವಾ ನೇಮಕಗೊಳ್ಳಲು ಅಥವಾ ಮುಂದುವರೆಯಲು ಅರ್ಹನಾಗತಕ್ಕದಲ್ಲ, (8)ನೇ ಉಪ ಪ್ರಕರಣದ ಉಪಬಂಧಗಳು ಯಥೋಚಿತ ವ್ಯತ್ಯಾಸಗಳೊಂದಿಗೆ ಅನ್ವಯವಾಗತಕ್ಕದ್ದು".

**23. 29ಇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 29ಇ ಪ್ರಕರಣದ ಕೊನೆಯಲ್ಲಿ ಈ ಮುಂದಿನ ಪರಂತುವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಸಹಕಾರಿ ಚುನಾವಣಾ ಆಯೋಗವು ಮಂಡಲಿಯ ಉಳಿದ ಪದಾವಧಿಯು ಅದರ ಮೂಲ ಅವಧಿಯ ಅರ್ಧಕ್ಕಿಂತ ಹೆಚ್ಚು ಇದ್ದರೆ, ಮಂಡಲಿಯ ನಿರ್ದೇಶಕರ ಪದದಲ್ಲಿನ ಯಾವುದೇ ಖಾಲಿ ಸ್ಥಾನವನ್ನು ಭರ್ತಿಮಾಡಲು ಚುನಾವಣೆಯನ್ನು ನಡೆಸತಕ್ಕದ್ದು:

ಮತ್ತು ಪರಂತು, ಮಂಡಲಿಯ ಉಳಿದಿರುವ ಪದಾವಧಿಯು ಅದರ ಮೂಲ ಅವಧಿಯ ಅರ್ಧಕ್ಕಿಂತ ಕಡಿಮೆ ಇರುವಲ್ಲಿ, ಯಾವ ವರ್ಗದ ಸದಸ್ಯರಿಗೆ ಸಂಬಂಧಪಟ್ಟಂತೆ ಸ್ಥಾನವು ಖಾಲಿಯಾಗಿದೆಯೋ ಅದೇ ವರ್ಗದ ಸದಸ್ಯರ ಪೈಕಿ ನಾಮನಿರ್ದೇಶನ ಮಾಡುವ ಮೂಲಕ ಮಂಡಲಿಯಲ್ಲಿನ ಖಾಲಿ ಸ್ಥಾನವನ್ನು ಮಂಡಲಿಯು ಭರ್ತಿ ಮಾಡಬಹುದು."

**24. 29ಎಫ್ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 29 ಎಫ್ ಪ್ರಕರಣದಲ್ಲಿ,–

(i) (4)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(4) ಸಹಕಾರಿ ಸಂಘದ ಪದಾಧಿಕಾರಿಗಳ ಪದಾವಧಿಯು ಚುನಾವಣೆಯ ದಿನಾಂಕದಿಂದ ಐದು ವರ್ಷಗಳಾಗಿರತಕ್ಕದ್ದು ಮತ್ತು ಅದು ಮಂಡಲಿಯ ಅವಧಿಯ ಜೊತೆಗೆ ಕೊನೆಗೊಳ್ಳತಕ್ಕದ್ದು.

(5) ಸಹಕಾರಿ ಚುನಾವಣಾ ಆಯೋಗವು, ಮಂಡಲಿಗೆ ಮತ್ತು ಅಧ್ಯಕ್ಷ ಅಥವಾ ಚೇರ್ ಪರ್ಸನ್ ಅವರ, ಉಪಾಧ್ಯಕ್ಷ ಅಥವಾ ವೈಸ್ ಚೇರ್ ಪರ್ಸನ್ ಅವರ ಪದಕ್ಕೆ ಮತ್ತು ಸಹಕಾರ ಸಂಘದ ಉಪವಿಧಿಗಳ ಪ್ರಕಾರ ಚುನಾಯಿಸುವುದು ಅಗತ್ಯವಾಗಿರುವ ಅಂಥ ಇತರ ಪದಾಧಿಕಾರಿಗಳ ಪದಕ್ಕೆ ಸಹ ಮಹಾ ಚುನಾವಣೆಯ ತರುವಾಯ ಮಂಡಲಿಯ ರಚನೆಯ ಅಥವಾ ಭಾವಿತ ರಚನೆಯ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಚುನಾವಣೆಗಳನ್ನು ನಡೆಸತಕ್ಕದ್ದು.

(6) ಸಹಕಾರ ಚುನಾವಣಾ ಆಯೋಗವು, ಸಹಕಾರ ಸಂಘದ ನಿರ್ದೇಶಕರ ಅಥವಾ ಯಾರೇ ಪದಾಧಿಕಾರಿಗಳ ಪದದಲ್ಲಿ ಯಾವುದೇ ಆಕಸ್ಮಿಕ ಖಾಲಿ ಸ್ಥಾನ ಉಂಟಾದರೆ, ಅಂಥ ಆಕಸ್ಮಿಕ ಖಾಲಿಸ್ಥಾನವನ್ನು ಭರ್ತಿಮಾಡಲು, ಅಧಿಸೂಚಿತವಾಗಿರುವ ದಿನಾಂಕದಿಂದ ಅರವತ್ತು ದಿನಗಳೊಳಗೆ ಚುನಾವಣೆಯನ್ನು ನಡೆಸತಕ್ಕದ್ದು.

(i) (5), (6), (7) ಮತ್ತು (8) ಪ್ರಕರಣಗಳನ್ನು ಬಿಟ್ಟುಬಿಡತಕ್ಕದು.

**25. 29ಜಿ ಪ್ರಕರಣದ ತಿದ್ದಿಪಡಿ.–** ಮೂಲ ಅಧಿನಿಯಮದ 29ಜಿ ಪ್ರಕರಣದಲ್ಲಿ, (4ಬಿ) ಉಪ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(4ಸಿ) ಸಹಕಾರ ಸಂಘದ ಮುಖ್ಯ ಕಾರ್ಯನಿರ್ವಹಣಾಧಿಕಾರಿಯು, ಮಂಡಲಿಯ ಪದಾಧಿಕಾರಿಗಳ ಚುನಾವಣೆಯಲ್ಲಿ ಮತ ನೀಡುವ ಹಕ್ಕು ಹೊಂದಿರತಕ್ಕದ್ದಲ್ಲ."

**26. 30ನೇ ಪ್ರಕರಣದ ಪ್ರತಿಯೋಜನೆ.–** ಮೂಲ ಅಧಿನಿಯಮದ 30 ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"30 ಮಂಡಲಿಯ ರದ್ದಿಯಾತಿ ಅಥವಾ ಅಮಾನತು.–** (1) ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಒಳಗೊಂಡಿದ್ದರೂ, ಸಹಕಾರ ಸಂಘದ ಯಾವುದೇ ಮಂಡಲಿಯನ್ನು, ಆರು ತಿಂಗಳನ್ನು ಮೀರುವ ಅವಧಿಗೆ ರದ್ದುಗೊಳಿಸತಕ್ಕದಲ್ಲ ಅಥವಾ ಅಮಾನತ್ತಿನಲ್ಲಿಡತಕ್ಕದ್ದಲ್ಲ;

ಪರಂತು, ಬ್ಯಾಂಕಿಂಗ್ ವ್ಯವಹಾರವನ್ನು ನಡೆಸುತ್ತಿರುವ ಸಹಕಾರ ಸಂಘದ ಸಂದರ್ಭದಲ್ಲಿ, ಈ ಖಂಡದ ಉಪಬಂಧವು, "ಆರು ತಿಂಗಳು" ಎಂಬ ಪದಗಳಿಗೆ "ಒಂದು ವರ್ಷ" ಎಂಬ ಪದಗಳನ್ನು ಪ್ರತಿಯೋಜಿಸಿದ್ದಿದ್ದರೆ ಹೇಗೋ ಹಾಗೆ ಪರಿಣಾಮವನ್ನು ಹೊಂದಿರತಕ್ಕದ್ದು.

(2) ಸಹಕಾರ ಸಂಘದ ಮಂಡಲಿಯು.–

(i) ಈ ಅಧಿನಿಯಮ ಅಥವಾ ನಿಯಮಗಳು ಅಥವಾ ಉಪವಿಧಿಗಳ ಮೂಲಕ ಅದಕ್ಕೆ ವಹಿಸಿರುವ ಕರ್ತವ್ಯಗಳನ್ನು ನಿರ್ವಹಿಸುವಲ್ಲಿ ಸತತವಾಗಿ ತಪ್ಪಿತವನ್ನು ಎಸಗುತ್ತಿದೆ ಅಥವಾ ಉಪೇಕ್ಷಿಸುತ್ತಿದೆ ಎಂದು; ಅಥವಾ

(ii) ಸಂಘದ ಅಥವಾ ಅದರ ಸದಸ್ಯರ ಹಿತಾಸಕ್ತಿಗೆ ಬಾಧಕ ಉಂಟುಮಾಡುವ ಯಾವುದೇ ಕೃತ್ಯ ಎಸಗುತ್ತಿದೆ ಎಂದು; ಅಥವಾ

(iii) ಮಂಡಲಿಯ ಸಂರಚನೆಯಲ್ಲಿ ಅಥವಾ ಕಾರ್ಯ ನಿರ್ವಹಣೆಯಲ್ಲಿ ಇಕ್ಕಟ್ಟಿನ ಸ್ಥಿತಿ ಇದೆ ಎಂದು; ಅಥವಾ

(iv) ಪತ್ತೆಹಚ್ಚಲಾಗಿರುವ ಗಂಭೀರ ಸ್ವರೂಪದ ಹಣಕಾಸು ಅಕ್ರಮಗಳು ಅಥವಾ ಮೋಸ ನಡೆದಿದೆ ಎಂದು; ಅಥವಾ

(v) ಗೊತ್ತುಪಡಿಸಿದ ಕಾಲದೊಳಗಾಗಿ ಮಂಡಲಿಗೆ ಚುನಾವಣೆಗಳನ್ನು ನಡೆಸಲು ಚುನಾವಣಾ ಆಯೋಗವು ನಿರೂಪಿಸಿರುವ ಕ್ಯಾಲೆಂಡರಿನ ಪ್ರಕಾರ ಚುನಾವಣಾ ಆಯೋಗಕ್ಕೆ ಪುಸ್ತಕಗಳು ಮತ್ತು ದಾಖಲೆಗಳು ಅವಶ್ಯ ಮಾಹಿತಿ ಮತ್ತು ನೆರವನ್ನು ಒದಗಿಸಲು ವಿಫಲವಾಗಿದೆ ಎಂದು ಮತ್ತು ತತ್ಪರಿಣಾಮವಾಗಿ ಅಥವಾ ಅನ್ಯಥಾ ಗೊತ್ತುಪಡಿಸಿದ ಕಾಲದೊಳಗೆ ಚುನಾವಣಾ ಆಯೋಗವು ಚುನಾವಣೆಗಳನ್ನು ನಡೆಸಲು ವಿಫಲವಾಗಿದೆ ಎಂದು,

– ರಿಜಿಸ್ಟ್ರಾರನು ಅಭಿಪ್ರಾಯಪಟ್ಟರೆ, ಅವನು, ಮಂಡಲಿಯ ಆಕ್ಷೇಪಣೆಗಳು ಯಾವುದಾದರೂ ಇದ್ದರೆ ಅವುಗಳನ್ನು ತಿಳಿಸಲು ಮಂಡಲಿಗೆ ಒಂದು ಅವಕಾಶವನ್ನು ನೀಡಿದ ತರುವಾಯ, ಲಿಖಿತ ಆದೇಶದ ಮೂಲಕ ಸದರಿ ಮಂಡಲಿಯನ್ನು ರದ್ದುಗೊಳಿಸಬಹುದು ಅಥವಾ ಅಮಾನತುಗೊಳಿಸಬಹುದು ಮತ್ತು ಆರು ತಿಂಗಳನ್ನು ಮೀರದ ಅವಧಿಗೆ ಸಂಘದ ವ್ಯವಹಾರಗಳನ್ನು ನಿರ್ವಹಿಸಲು ಒಬ್ಬ ಆಡಳಿತಾಧಿಕಾರಿಯನ್ನು ನೇಮಕ ಮಾಡಬಹುದು:

ಪರಂತು, ಯಾವುದೇ ಸರ್ಕಾರಿ ಷೇರು ಧಾರಣೆ ಅಥವಾ ಸರ್ಕಾರವು ನೀಡಿರುವ ಸಾಲ, ಹಣಕಾಸು ನೆರವು ಅಥವಾ ಯಾವುದೇ ಖಾತ್ರಿ ಇಲ್ಲದಿದ್ದರೆ, ಯಾವುದೇ ಸಹಕಾರ ಸಂಘದ ಮಂಡಲಿಯನ್ನು ರದ್ದುಗೊಳಿಸತ್ಕದ್ದಲ್ಲ ಅಥವಾ ಅಮಾನತ್ತಿನಲ್ಲಿಡತಕ್ಕದ್ದಲ್ಲ:

ಮತ್ತು ಪರಂತು, ಸಹಕಾರ ಸಂಘದ ಮಂಡಲಿಯ ರದ್ದಿಯಾತಿಯನ್ನು ಸಂದರ್ಭಾನುಸಾರ ಭಾರತದ ರಿಸರ್ವ್ ಬ್ಯಾಂಕ್ ನೊಂದಿಗೆ/ರಾಷ್ಟ್ರೀಯ ಬ್ಯಾಂಕ್ ನೊಂದಿಗೆ ಸಮಾಲೋಚಿಸಿದ ತರುವಾಯ ಮಾತ್ರವೇ ಮಾಡತಕ್ಕದ್ದು ಮತ್ತು ಬ್ಯಾಂಕಿಂಗ್ ವಿನಿಮಯ ಅಧಿನಿಯಮ, 1949 ರ (AACS) ಉಪಬಂಧಗಳೂ ಸಹ ಅನ್ವಯವಾಗತಕ್ಕದ್ದು.

(3) ಹಾಗೆ ನೇಮಕಗೊಂಡ ಆಡಳಿತಾಧಿಕಾರಿಯು, ರಿಜಿಸ್ಟ್ರಾರನ ನಿಯಂತ್ರಣಕ್ಕೆ ಮತ್ತು ಆತನು ಕಾಲಕಾಲಕ್ಕೆ ನೀಡಬಹುದಾದಂಥ ಸೂಚನೆಗಳಿಗೆ ಒಳಪಟ್ಟು, ಸಹಕಾರ ಸಂಘದ ಮಂಡಲಿಯ ಅಥವಾ ಯಾರೇ ಪದಾಧಿಕಾರಿಯ ಎಲ್ಲಾ ಅಥವಾ ಯಾವುದೇ ಪ್ರಕಾರ್ಯಗಳನ್ನು ನಿರ್ವಹಿಸತಕ್ಕದ್ದು ಮತ್ತು ಸಂಘದ ಹಿತದೃಷ್ಟಿಯಿಂದ ಅವನು ಅವಶ್ಯವೆಂದು ಪರಿಗಣಿಸಬಹುದಾದಂಥ ಕ್ರಮವನ್ನು ಕೈಗೊಳ್ಳತಕ್ಕದ್ದು.

(4)ಮಂಡಲಿಯನ್ನು ರದ್ದುಗೊಳಿಸಿರುವ ಸಂದರ್ಭದಲ್ಲಿ, ಆಡಳಿತಾಧಿಕಾರಿಯು ಅವನ ಪದಾವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ, ಈ ಅಧಿನಿಯಮ, ನಿಯಮಗಳು ಮತ್ತು ಸಹಕಾರ ಸಂಘದ ಉಪವಿಧಿಗಳಿಗೆ ಅನುಸಾರವಾಗಿ ಚುನಾವಣೆಗಳನ್ನು ನಡೆಸಲು ಮತ್ತು ಹೊಸ ಮಂಡಲಿಯನ್ನು ರಚಿಸಲು ಹಾಗೂ ಚುನಾಯಿತ ಮಂಡಳಿಗೆ ಆಡಳಿತವನ್ನು ಹಸ್ತಾಂತರಿಸಲು ಏರ್ಪಾಡು ಮಾಡತಕ್ಕದ್ದು.

(5) ಮಂಡಲಿಯನ್ನು ರದ್ದುಗೊಳಿಸಿರುವ ಸಂದರ್ಭದಲ್ಲಿ, ರಿಜಿಸ್ಟ್ರಾರರು ಸದರಿ ಮಂಡಲಿಯನ್ನು ಪುನರ್ ಸ್ಥಾಪಿಸತಕ್ಕದ್ದು ಮತ್ತು ಆಡಳಿತಾಧಿಕಾರಿಯು ಅವನ ಪದಾವಧಿಯು ಮುಕ್ತಾಯಗೊಂಡ ಮೇಲೆ ಸದರಿ ಮಂಡಲಿಯ ಆಡಳಿತವನ್ನು ಹಸ್ತಾಂತರಿಸತಕ್ಕದ್ದು ಮತ್ತು ಮಂಡಲಿಯ ಮೂಲ ಪದಾವಧಿಯನ್ನು ಲೆಕ್ಕಹಾಕುವಾಗ ಅಮಾನತ್ತಿನ ಅವಧಿಯನ್ನು ಪರಿಗಣಿಸತಕ್ಕದ್ದು.

(6) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, ರಿಜಿಸ್ಟ್ರಾರರು, ಸಹಕಾರ ಸಂಘದ ಸಂಧರ್ಭದಲ್ಲಿ ಸಹಕಾರ ಬ್ಯಾಂಕಿನ ವ್ಯವಹಾರಗಳನ್ನು ಠೇವಣಿದಾರರ ಹಿತಾಸಕ್ತಿಗೆ ಬಾದಕ ಉಂಟುಮಾಡುವ ರೀತಿಯಲ್ಲಿ ನಡೆಸುತ್ತಿರುವುದನ್ನು ತಡೆಗಟ್ಟಲು ಅಥವಾ ಸಹಕಾರ ಬ್ಯಾಂಕಿನ ಯುಕ್ತ ಆಡಳಿತವನ್ನು ಸಾಧಿಸುವುದಕ್ಕಾಗಿ ಭಾರತೀಯ ರಿಸರ್ವ್ ಬ್ಯಾಂಕ್ ಸಾರ್ವಜನಿಕ ಹಿತದೃಷ್ಟಿಯಿಂದ ಹಾಗೂ ಅಗತ್ಯ ಪಡಿಸಿದರೆ, ಲಿಖಿತ ಆದೇಶದ ಮೂಲಕ ಆ ಸಹಕಾರ ಬ್ಯಾಂಕಿನ ಮಂಡಲಿಯನ್ನು ತೆಗೆದುಹಾಕತಕ್ಕದ್ದು, ಮತ್ತು ಭಾರತದ ರಿಸರ್ವ್ ಬ್ಯಾಂಕ್ ನಿರ್ದಿಷ್ಟ ಪಡಿಸಬಹುದಾದಂತೆ ಒಂದು ವರ್ಷವನ್ನು ಮೀರದ ಅಂಥ ಅವಧಿಯವರೆಗೆ ಸಹಕಾರ ಬ್ಯಾಂಕಿನ ವ್ಯವಹಾರಗಳನ್ನು ನಿರ್ವಹಿಸಲು ಒಬ್ಬ ಆಡಳಿತಾಧಿಕಾರಿಯನ್ನು ನೇಮಕ ಮಾಡತಕ್ಕದ್ದು.

(7) ಸರ್ಕಾರದ ಅಥವಾ ಸಹಕಾರಿ ಸಂಘಟನೆಯ ಸಮುಚಿತ ದರ್ಜೆಯ ಯಾರೇ ಅದಿಕಾರಿ ಅಥವಾ ಉದ್ಯೋಗಿಯನ್ನು ಸಹಕಾರ ಸಂಘದ ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಬಹುದು.

(i) ಅವನು ಪೂರ್ಣಕಾಲಿಕ ಆದಾರದ ಮೇಲೆ ನೇಮಕಗೊಂಡಿದ್ದರೆ ಅವನ ವೇತನ ಮತ್ತು ಇತರ ಭತ್ಯೆಗಳನ್ನು ಸಹಕಾರ ಸಂಘವು ಭರಿಸತಕ್ಕದ್ದು, ಇಲಾಖೆಯಲ್ಲಿ ಅಥವಾ ಸಂಘಟನೆಯಲ್ಲಿ ಅವನಿಗೆ ಅನ್ವಯವಾಗುವ ಸೇವಾ ನಿಯಮಗಳು, ಸಂಘದ ಆಡಳಿತಾಧಿಕಾರಿಯಾಗಿ ಅವನ ಸೇವೆಯನ್ನು ನಿಯಂತ್ರಿಸುವುದು ಮುಂದುವರೆಯತಕ್ಕದ್ದು.

(ii) ಅವನು ತನ್ನ ನಿಯತ ಹುದ್ದೆಯ ಜೊತೆಗೆ ಆಡಳಿತಾಧಿಕಾರಿಯಾಗಿ ನೇಮಕಗೊಂಡರೆ ಅವನ ಮೂಲವೇತನದ ಶೇಕಡಾ ಹತ್ತರ ದರದಲ್ಲಿ ಪರಿಶ್ರಮ ಧನವನ್ನು ಸಹಕಾರ ಸಂಘದ ನಿಧಿಯಿಂದ ಅವನಿಗೆ ಸಂದಾಯ ಮಾಡತಕ್ಕದ್ದು, ಇಲಾಖೆಯಲ್ಲಿ ಅಥವಾ ಸಂಘಟನೆಯಲ್ಲಿ ಅವನಿಗೆ ಅನ್ವಯವಾಗುವ ಸೇವಾ ನಿಯಮಗಳು, ಸಂಘದ ಆಡಳಿತಗಾರನಾಗಿ ಅವನ ಸೇವೆಯನ್ನು ನಿಯಂತ್ರಿಸುವುದು ಮುಂದುವರೆಯತಕ್ಕದ್ದು.

**27. 34ನೇ ಪ್ರಕಣದ ತಿದ್ದುಪಡಿ.–** ಮೂಲ ಅಧಿನಿಯಮದ 34ನೇ ಪ್ರಕರಣದಲ್ಲಿ, (1)ನೇ ಉಪಪ್ರಕರಣದಲ್ಲಿ ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ತನ್ನ ಸಂಬಳ ಅಥವಾ ಮಜೂರಿಯಿಂದ ಮುರುಗಡೆ ಮಾಡಿಕೊಳ್ಳಲು ಒಪ್ಪುವ ಉದ್ಯೋಗಿಯಿಂದ ಲಿಖಿತದಲ್ಲಿ ಪೂರ್ವ ಸಮ್ಮತಿಯನ್ನು ನಿಯೋಜಕನು ಪಡೆಯತಕ್ಕದ್ದು;

ಮತ್ತು ಪರಂತು, ಉದ್ಯೋಗಿಯ ಹೊಣೆಗಾರಿಕೆಯು ಅವರ ಸಂಬಳದಿಂದ ಆಗುವ ಎಲ್ಲ ಒಟ್ಟು ಮುರುಗಡೆಗಳು ಸೇರಿದಂತೆ ಉದ್ಯೋಗಿಯ ಸಂಬಳದ ಶೇಕಡಾ ಐವತ್ತರಷ್ಟನ್ನು ಮೀರದಂತೆ ಮೊಬಲಗಿನ ಮುರುಗಡೆಯ ಮಟ್ಟಿಗೆ ಸೀಮಿತವಾಗಿರತಕ್ಕದ್ದು:

ಅಲ್ಲದೆ ಪರಂತು, ಸಹಕಾರ ಸಂಘದ ಮಂಡಳಿಯು, ಸಾಲದ ಮೇಲಿನ ಬಡ್ಡಿಯ ಜೊತೆಗೆ ಸಾಲದ ಕಂತುಗಳ ನಿಮಿತ್ತ ಮಾಡುವ ಮುರುಗಡೆಗಳನ್ನು ಸೇರಿದಂತೆ ಎಲ್ಲ ಒಟ್ಟು ಮುರುಗಡೆಗಳು ಉದ್ಯೋಗಿಯ ಸಂಬಳದ ಶೇಕಡಾ ಐವತ್ತರಷ್ಟನ್ನು ಮೀರತಕ್ಕದ್ದಲ್ಲ ಎಂಬ ರೀತಿಯಲ್ಲಿ ಉದ್ಯೋಗಿಗೆ ಮಂಜೂರು ಮಾಡಬೇಕಾದ ಸಾಲದ ಮೊಬಲಗನ್ನು ಮತ್ತು ಕಂತುಗಳ ಸಂಖ್ಯೆಯನ್ನು ನಿರ್ಧರಿಸತಕ್ಕದ್ದು".

**28. 39ಎ ಪ್ರಕರಣದ ಪ್ರತಿಯೋಜನೆ.–** (1) ಮೂಲ ಅಧಿನಿಯಮದ 39ಎ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"39ಎ ಚುನಾವಣೆಗಳನ್ನು ನಡೆಸುವುದು.–** (1) ಯಾವುದೇ ಆಕಸ್ಮಿಕ ಖಾಲಿ ಸ್ಥಾನವೂ ಸೇರಿದಂತೆ ಒಟ್ಟು ಒಂದು ಸಹಕಾರ ಸಂಘದ ಮಂಡಳಿಯ ಸದಸ್ಯರ ಪ್ರತಿಯೊಂದು ಮಹಾ ಚುನಾವಣೆಯನ್ನು ಮತ್ತು ಪದಾಧಿಕಾರಿಗಳ ಚುನಾವಣೆಯನ್ನು, ಅನ್ವಯವಾಗಬಹುದಾದ ಮಟ್ಟಿಗೆ, ಸಹಕಾರಿ ಚುನಾವಣಾ ಆಯೋಗದ ಅಧೀಕ್ಷಣೆ, ನಿರ್ದೇಶನ ಮತ್ತು ನಿಯಂತ್ರಣಕ್ಕೆ ಒಳಪಟ್ಟು ನಡೆಸತಕ್ಕದ್ದು.

(2) ಸಹಕಾರ ಸಂಘಗಳ ಮಂಡಲಿಯ ಸದಸ್ಯರ ಮಹಾ ಚುನಾವಣೆಗಳು, ಈ ಮುಂದಿನಂತೆ, ನಾಲ್ಕು ಹಂತಗಳಲ್ಲಿ ನಡೆಯತಕ್ಕದ್ದು.

(ಎ) ಮೊದಲ ಹಂತದಲ್ಲಿ ಪ್ರಾಥಮಿಕ ಸಹಕಾರ ಸಂಘಗಳಿಗೆ ಸಂಬಂಧಪಟ್ಟಂತೆ ಚುನಾವಣೆಗಳು ನಡೆಯತಕ್ಕದ್ದು;

(ಬಿ) ಎರಡನೇ ಹಂತದಲ್ಲಿ, ಸೆಕೆಂಡರಿ ಸಂಘಗಳಿಗೆ ಚುನಾವಣೆಗಳನ್ನು ನಡೆಸುವುದಕ್ಕಾಗಿನ ಚುನಾವಣಾ ಪ್ರಕ್ರಿಯೆಯು ಪ್ರಾಥಮಿಕ ಸಂಘಗಳ ಚುನಾವಣೆಗಳ ಪೂರ್ಣಗೊಂಡ ಹದಿನೈದು ದಿನಗಳ ತರುವಾಯ ಪ್ರಾರಂಭವಾಗತಕ್ಕದ್ದು;

(ಸಿ) ಮೂರನೇ ಹಂತದಲ್ಲಿ, ಫೆಡರಲ್ ಸಂಘಗಳ ಚುನಾವಣೆಗಳನ್ನು ನಡೆಸುವುದುಕ್ಕಾಗಿನ ಚುನಾವಣಾ ಪ್ರಕ್ರಿಯೆಯು ಸೆಕೆಂಡರಿ ಸಂಘಗಳ ಚುನಾವಣೆಗಳು ಪೂರ್ಣಗೊಂಡ ಮೂವತ್ತು ದಿನಗಳ ತರುವಾಯ ಪ್ರಾರಂಭವಾಗತಕ್ಕದ್ದು.

(ಡಿ) ನಾಲ್ಕನೇ ಹಂತದಲ್ಲಿ, ಅಪೆಕ್ಸ್ ಸಂಘಗಳಿಗೆ ಚುನಾವಣೆಗಳನ್ನು ನಡೆಸುವುದಕ್ಕಾಗಿನ ಚುನಾವಣಾ ಪ್ರಕ್ರಿಯೆಯು ಫೆಡರಲ್ ಸಂಘಗಳ ಚುನಾವಣೆಗಳು ಪೂರ್ಣಗೊಂಡ ಮೂವತ್ತು ದಿನಗಳ ತರುವಾಯ ಪ್ರಾರಂಭವಾಗತಕ್ಕದ್ದು;

ಪರಂತು, ಸಹಕಾರಿ ಚುನಾವಣಾ ಆಯೋಗವು ಮತದಾರರ ಪಟ್ಟಿಯ ತಯಾರಿಕೆಗಾಗಿ ಮತ್ತು ಚುನಾವಣೆಗಳನ್ನು ನಡೆಸುವುದಕ್ಕಾಗಿ ಪೂರ್ವಸಿದ್ದತಾ ಕಾರ್ಯವನ್ನು ಒಂದು ಸಹಕಾರ ಸಂಘದ ಮಂಡಳಿಯ ಪದಾವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ ಕೊನೆಯ ಆರು ತಿಂಗಳ ಅವಧಿಯಲ್ಲಿ ಪ್ರಾರಂಭಿಸಬಹುದು.

(3) ಈ ಅಧಿನಿಯಮದಲ್ಲಿ, ನಿಯಮಗಳಲ್ಲಿ ಅಥವಾ ಯಾವುದೇ ಸಹಕಾರ ಸಂಘದ ಉಪವಿಧಿಗಳಲ್ಲಿ ಏನೇ ಒಳಗೊಂಡಿದ್ದರೂ, 2013ರ ಮಾರ್ಚ ಮತ್ತು ಏಪ್ರಿಲ್ ತಿಂಗಳಲ್ಲಿ ನಡೆಯಬೇಕಾಗಿರುವ ಮಂಡಳಿಗಳ ಚುನಾವಣೆಗಳನ್ನು ಮತ್ತು ತತ್ಪರಿಣಾಮದ ಪದಾಧಿಕಾರಿಗಳ ಚುನಾವಣೆಗಳನ್ನು,-

(i) ಪ್ರಾಥಮಿಕ ಸಹಕಾರ ಸಂಘಗಳಿಗೆ ಸಂಬಂಧಪಟ್ಟಂತೆ 2013ರ ಸೆಪ್ಟೆಂಬರ್ ತಿಂಗಳ ಮೂವತ್ತನೇ ತಾರೀಖಿಗೆ ಮುಂಚೆ;

(ii) ಸೆಕೆಂಡರಿ ಸಹಕಾರ ಸಂಘಗಳಿಗೆ ಸಂಬಂಧಪಟ್ಟಂತೆ, 2013ರ ಅಕ್ಟೋಬರ್ ಮೂವತ್ತೊಂದನೇ ತಾರೀಖಿಗೆ ಮುಂಚೆ;

(iii) ಫೆಡರಲ್ ಸಂಘಗಳಿಗೆ ಸಂಬಂಧಪಟ್ಟಂತೆ 2013ರ ನವೆಂಬರ್ ಮೂವತ್ತನೇ ತಾರೀಖಿಗೆ ಮುಂಚೆ;

(iv) ಅಪೆಕ್ಸ್ ಸಹಕಾರ ಸಂಘಗಳಿಗೆ ಸಂಬಂಧಪಟ್ಟಂತೆ 2013ರ ಡಿಸೆಂಬರ್ ಮೂವತ್ತೊಂದನೇ ತಾರೀಖಿಗೆ ಮುಂಚೆ,

– ನಡೆಸತಕ್ಕದ್ದು:

ಪರಂತು, ಅಂಥ ಎಲ್ಲ ಸಹಕಾರ ಸಂಘಗಳ ಪದಧಾರಿ ಮಂಡಳಿಗಳು, ಮೇಲ್ಕಂಡಂತೆ ಚುನಾವಣೆಗಳನ್ನು ನಡೆಸುವವರೆಗೆ ತಮ್ಮ ತಮ್ಮ ಪದಗಳಲ್ಲಿ ಮುಂದುವರೆಯತಕ್ಕದ್ದು.

**39ಎಎ. ಸಹಕಾರಿ ಚುನಾವಣಾ ಆಯೋಗ.–** (1) ರಾಜ್ಯ ಸರ್ಕಾರವು, ಸರ್ಕಾರಿ ರಾಜ್ಯ ಪತ್ರದಲ್ಲಿ ಅಧಿಸೂಚನೆಯ ಮೂಲಕ, ಒಬ್ಬ ಸಹಕಾರಿ ಚುನಾವಣಾ ಆಯುಕ್ತ ಮತ್ತು ಒಬ್ಬ ಕಾರ್ಯದರ್ಶಿಯನ್ನು ಒಳಗೊಂಡಿರುವ ಒಂದು ಸಹಕಾರಿ ಚುನವಣಾ ಆಯೋಗವನ್ನು ರಚಿಸತಕ್ಕದ್ದು.

(2) ರಾಜ್ಯದಲ್ಲಿನ ಸಹಕಾರ ಸಂಘಗಳಿಗೆ ನಡೆಯುವ ಎಲ್ಲ ಚುನಾವಣೆಗಳಿಗೆ ಮತದಾರರ ಪಟ್ಟಿಗಳನ್ನು ತಯಾರಿಸುವ ಮತ್ತು ಚುನಾವಣೆಗಳನ್ನು ನಡೆಸುವ ಕಾರ್ಯದ ಅಧೀಕ್ಷಣೆ, ನಿರ್ದೇಶನ ಮತ್ತು ನಿಯಂತ್ರಣವು ಸಹಕಾರಿ ಚುನಾವಣಾ ಆಯೋಗದಲ್ಲಿ ನಿಹಿತವಾಗಿರತಕ್ಕದ್ದು.

(3) ರಾಜ್ಯಪಾಲರು, ರಾಜ್ಯ ಸರ್ಕಾರದ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿಯ ದರ್ಜೆಯ ಒಬ್ಬ ಅಧಿಕಾರಿಯಾಗಿರುವ ಅಥವಾ ಆಗಿದ್ದಿರುವ ಒಬ್ಬ ವ್ಯಕ್ತಿಯನ್ನು, ಮುಖ್ಯ ಮಂತ್ರಿಯವರ ಶಿಫಾರಸ್ಸಿನ ಮೇಲೆ ಸಹಕಾರಿ ಚುನಾವಣಾ ಆಯುಕ್ತರೆಂದು ನೇಮಕ ಮಾಡತಕ್ಕದ್ದು ಮತ್ತು ಅಂಥ ಸಹಕಾರಿ ಚುನಾವಣಾ ಆಯುಕ್ತರು ಐದು ವರ್ಷಗಳ ಅವಧಿಯವರೆಗೆ ಪದಧಾರಣ ಮಾಡತಕ್ಕದ್ದು.

(4) ರಾಜ್ಯ ಸರ್ಕಾರವು, ಸಹಕಾರ ಸಂಘಗಳ ಹೆಚ್ಚುವರಿ ರಿಜಿಸ್ಟ್ರಾರ್ ದರ್ಜೆಯ ಒಬ್ಬ ಅಧಿಕಾರಿಯಾಗಿರುವ ಅಥವಾ ಆಗಿದ್ದಿರುವ ಒಬ್ಬ ವ್ಯಕ್ತಿಯನ್ನು ಸಹಕಾರಿ ಚುನಾವಣಾ ಆಯೋಗದ ಕಾರ್ಯದರ್ಶಿಯಾಗಿ ನೇಮಕ ಮಾಡತಕ್ಕದ್ದು.

(5) ಸಹಕಾರಿ ಚುನಾವಣಾ ಆಯುಕ್ತ ಮತ್ತು ಕಾರ್ಯದರ್ಶಿಯ ಸಂಬಳ ಮತ್ತು ಭತ್ಯೆಗಳೂ ಸೇರಿದಂತೆ ಸೇವಾ ಷರತ್ತುಗಳು ನಿಯಮಿಸಬಹುದಾದಂತೆ ಇರತಕ್ಕದ್ದು;

(6) (8)ನೇ ಉಪಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ಸಹಕಾರಿ ಚುನಾವಣಾ ಆಯುಕ್ತನನ್ನು, ರಾಜ್ಯಪಾಲರು ಆದೇಶಿಸಿದ ಮತ್ತು ಉಚ್ಚನ್ಯಾಯಾಲಯದ ನ್ಯಾಯಾಧೀಶರು ನಡೆಸಿದ ವಿಚಾರಣೆಯ ತರುವಾಯ, ವಿಚಾರಣೆಯಲ್ಲಿ ಅಂಥ ಆಧಾರದಲ್ಲಿ ಚುನಾವಣಾ ಆಯುಕ್ತನನ್ನು ತೆಗೆದು ಹಾಕಲೇಬೇಕೆಂಬ ವರದಿಯ ಆಧಾರದ ಮೇಲೆ, ಸಾಬೀತಾದ ದುರ್ನಡತೆ ಅಥವಾ ಅಸಮರ್ಥತೆಯ ಹಿನ್ನೆಲೆಯಲ್ಲಿ, ರಾಜ್ಯಪಾಲರ ಆದೇಶದ ಮೂಲಕ ಆತನ ಪದದಿಂದ ತೆಗೆದುಹಾಕತಕ್ಕದ್ದು.

(7) ರಾಜ್ಯಪಾಲರು (6)ನೇ ಉಪಪ್ರಕರಣದ ಮೇರೆಗೆ ಯಾವ ಚುನಾವಣಾ ಆಯುಕ್ತರ ವಿರುದ್ಧ ವಿಚಾರಣೆ ಮಾಡಲು ಆದೇಶಿಸಲಾಗಿದೆಯೋ ಆ ಚುನಾವಣಾ ಆಯುಕ್ತರನ್ನು ಕಚೇರಿಗೆ ಹಾಜರಾಗುವುದರಿಂದ ನಿಷೇಧಿಸುವುದು ಅವಶ್ಯ ಎಂದು ಭಾವಿಸಿದ್ದರೆ, ಉಚ್ಚನ್ಯಾಯಾಲಯದ ನ್ಯಾಯಾಧೀಶರ ವರದಿಯನ್ನು ಸ್ವೀಕರಿಸಿದ ಮೇಲೆ ರಾಜ್ಯಪಾಲರು ಆದೇಶವನ್ನು ಹೊರಡಿಸುವವರೆಗೆ, ಪದದಿಂದ ಅಮಾನತುಗೊಳಿಸಬಹುದು

(8) (6)ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಸಹಕಾರಿ ಚುನಾವಣಾ ಆಯುಕ್ತರು,–

(ಎ) ನಿರ್ಣೀತ ದಿವಾಳಿಯಾಗಿದ್ದರೆ; ಅಥವಾ

(ಬಿ) ರಾಜ್ಯಪಾಲರ ಅಭಿಪ್ರಾಯದಲ್ಲಿ, ನೈತಿಕ ಅಧ:ಪತನವನ್ನೊಳಗೊಂಡ ಅಪರಾಧದ ನಿರ್ಣೀತ ಅಪರಾಧಿಯಾಗಿದ್ದರೆ; ಅಥವಾ

(ಸಿ) ಅವನ ಪದಾವಧಿಯಲ್ಲಿ, ಅವನ ಪದದ ಕರ್ತವ್ಯದಿಂದ ಹೊರಗೆ ಹಣ ಸಂದಾಯವಾಗುವ ಉದ್ಯೋಗದಲ್ಲಿ ನಿರತನಾಗಿದ್ದರೆ;

(ಡಿ) ರಾಜ್ಯಪಾಲರ ಅಭಿಪ್ರಾಯದಲ್ಲಿ, ಅವನು ಮಾನಸಿಕ ಅಥವಾ ದೈಹಿಕ ದುರ್ಬಲತೆಯ ಕಾರಣದಿಂದಾಗಿ ಪದದಲ್ಲಿ ಮುಂದುವರೆಯಲು ಸೂಕ್ತನಾಗಿಲ್ಲದಿದ್ದರೆ; ಅಥವಾ

(ಇ) ಆತನು ಚುನಾವಣಾ ಆಯುಕ್ತನಾಗಿ ತನ್ನ ಪ್ರಕಾರ್ಯಗಳ ಮೇಲೆ ಬಾಧಕವನ್ನುಂಟುಮಾಡುವ ಸಂಭವವಿರುವಂಥ ಹಣಕಾಸು ಅಥವಾ ಇತರ ಹಿತಾಸಕ್ತಿಯನ್ನು ಹೊಂದಿದ್ದಾನೆಂದು,

– ರಾಜ್ಯಪಾಲರು ಅಭಿಪ್ರಾಯಪಟ್ಟರೆ, ಅವರು ಆದೇಶದ ಮೂಲಕ ಚುನಾವಣಾ ಆಯುಕ್ತನ್ನು ಪದದಿಂದ ತೆಗೆದು ಹಾಕಬಹುದು.

(9) ಸಹಕಾರಿ ಚುನಾವಣಾ ಆಯುಕ್ತನು, ಕರ್ನಾಟಕ ಸರ್ಕಾರವು ಮಾಡಿಕೊಂಡ ಅಥವಾ ಅದರ ಪರವಾಗಿ ಮಾಡಿಕೊಳ್ಳಲಾದ ಯಾವುದೇ ಕರಾರಿನಲ್ಲಿ ಅಥವಾ ಒಪ್ಪಂದದಲ್ಲಿ ಸಂಬಂಧಪಟ್ಟವನಾಗಿದ್ದರೆ ಅಥವಾ ಹಿತಾಸಕ್ತಿ ಹೊಂದಿದ್ದರೆ ಅಥವಾ ಸದಸ್ಯನಾಗಿ ಮತ್ತು ನಿಗಮಿತ ಕಂಪನಿಯ ಇತರ ಸದಸ್ಯನಾಗಿ ಅನ್ಯಥಾ ಅದರಿಂದ ದೊರೆಯುವ ಯಾವುದೇ ಲಾಭ ಅಥವಾ ಯಾವುದೇ ಪ್ರಯೋಜನ ಅಥವಾ ಉಪಬಲಬ್ಧಗಳಲ್ಲಿ ಯಾವುದೇ ರೀತಿಯಲ್ಲಿ ಪಾಲ್ಗೊಂಡರೆ, ಅವನನ್ನು (6)ನೇ ಉಪಪ್ರಕರಣದ ಉದ್ದೇಶಗಳಿಗಾಗಿ ದುರ್ವರ್ತನೆಯ ತಪ್ಪಿತಸ್ಥನೆಂದು ಭಾವಿಸತಕ್ಕದ್ದು.

(10) ಸಹಕಾರಿ ಚುನಾವಣಾ ಆಯೋಗವು, ರಾಜ್ಯ ಸರ್ಕಾರದೊಂದಿಗೆ ಸಮಾಲೋಚನೆ ನಡೆಸಿ, (2)ನೇ ಉಪಪ್ರಕರಣದ ಅಡಿಯಲ್ಲಿ ತನಗೆ ಪ್ರದತ್ತವಾಗಿರುವ ಪ್ರಕಾರ್ಯಗಳನ್ನು ನಿರ್ವಹಿಸಲು ಅಗತ್ಯವಾದ ಅಧಿಕಾರಿಗಳ ಮತ್ತು ಇತರ ನೌಕರರ ಸಂಖ್ಯೆಯನ್ನು ನಿರ್ಧರಿಸತಕ್ಕದ್ದು ಮತ್ತು ಅಂಥ ಅಧಿಕಾರಿಗಳು ಮತ್ತು ನೌಕರರ ಸೇವೆಗಳನ್ನು ಒದಗಿಸುವಂತೆ ರಾಜ್ಯ ಸರ್ಕಾರವನ್ನು ಅಗತ್ಯಪಡಿಸತಕ್ಕದ್ದು

(11) (2)ನೇ ಉಪಪ್ರಕರಣದ ಅಡಿಯಲ್ಲಿ ಸಹಕಾರಿ ಚುನಾವಣಾ ಆಯೋಗಕ್ಕೆ ಪ್ರದತ್ತವಾದ ಪ್ರಕಾರ್ಯಗಳನ್ನು ನಿರ್ವಹಿಸುವುದಕ್ಕೆ ಅವಶ್ಯವಾಗಬಹುದಾದಷ್ಟು ಸಿಬ್ಬಂದಿಯನ್ನು, ಸಹಕಾರಿ ಚುನಾವಣಾ ಆಯೋಗವು ಹಾಗೆ ಕೋರಿದಾಗ, ಸಹಕಾರಿ ಚುನಾವಣಾ ಆಯೋಗಕ್ಕೆ ರಾಜ್ಯ ಸರ್ಕಾರವು ಹಾಗೆ ಒದಗಿಸತಕ್ಕದ್ದು.

(12) ಸಹಕಾರಿ ಚುನಾವಣಾ ಆಯೋಗದ ಅಧಿಕಾರಿಗಳು ಮತ್ತು ನೌಕರರ ಸಂಬಳ, ಭತ್ಯೆಗಳು, ಸೇವಾ ನಿಬಂಧನೆಗಳು ಮತ್ತು ಷರತ್ತುಗಳು ನಿಯಮಿಸಬಹುದಾದಂತೆ ಇರತಕ್ಕದ್ದು.

(13) ಈ ಅಧಿನಿಯಮದ ಉಪಬಂಧಗಳಿಗೆ ಒಳಪಟ್ಟು, ಚುನಾವಣೆಯನ್ನು ನಡೆಸುವುದಕ್ಕಾಗಿ ಕಾರ್ಯವಿಧಾನ ಮತ್ತು ಮಾರ್ಗಸೂಚಿಗಳು ನಿಯಮಿಸಹುದಾದಂತೆ ಇರತಕ್ಕದ್ದು.

(14) ಚುನಾವಣೆಗಳಿಗಾಗಿ ಮತದಾರರ ಪಟ್ಟಿಗಳನ್ನು ತಯಾರಿಸುವುದುಕ್ಕಾಗಿ ಮತ್ತು ಚುನಾವಣೆಗಳನ್ನು ನಡೆಸುವುದಕ್ಕಾಗಿ ತಗಲುವ ವೆಚ್ಚವನ್ನು ನಿಯಮಿಸಬಹುದಾದಂಥ ರೀತಿಯಲ್ಲಿ ಭರಿಸತಕ್ಕದ್ದು.

(15) ಪ್ರತಿಯೊಂದು ಸಹಕಾರ ಸಂಘದ ಮಂಡಳಿಯು,–

(ಎ) ತನ್ನ ಪದಾವಧಿಯ ಮುಕ್ತಾಯದ ಬಗ್ಗೆ ಅಂಥ ಪದಾವಧಿಯು ಮುಕ್ತಾಯವಾಗುವ ದಿನಾಂಕಕ್ಕೆ ಕನಿಷ್ಠ ಆರು ತಿಂಗಳಿಗೆ ಮುಂಚೆ ಸಹಕಾರಿ ಚುನಾವಣಾ ಆಯೋಗಕ್ಕೆ ತಿಳಿಸತಕ್ಕದ್ದು;

(ಬಿ) ಸಹಕಾರಿ ಚುನಾವಣಾ ಆಯೋಗವು ನಿಯಮಿಸಬಹುದಾದಂಥ ಕ್ಯಾಲೆಂಡರ್ ಪ್ರಕಾರ ಆಯೋಗವು ಅಗತ್ಯಪಡಿಸಬಹುದಾದಂಥ ಪುಸ್ತಕಗಳು, ದಾಖಲೆಗಳು ಮತ್ತು ಮಾಹಿತಿಯನ್ನು ಒದಗಿಸತಕ್ಕದ್ದು; ಮತ್ತು

(ಸಿ) ಸುಗಮವಾಗಿ ಮತದಾರರ ಪಟ್ಟಿಗಳನ್ನು ತಯಾರಿಸುವುದಕ್ಕಾಗಿ ಮತ್ತು ಚುನಾವಣೆಗಳನ್ನು ನಡೆಸುವುದಕ್ಕಾಗಿ ಎಲ್ಲ ಅವಶ್ಯಕ ನೆರವು, ಸಹಾಯ ಮತ್ತು ಸಹಕಾರವನ್ನು ನೀಡತಕ್ಕದ್ದು."

**29. 53ಎ ಪ್ರಕರಣವನ್ನು ಬಿಟ್ಟು ಬಿಡುವುದು.–** ಮೂಲ ಅಧಿನಿಯಮದ 53ಎ ಪ್ರಕರಣವನ್ನು ಬಿಟ್ಟು ಬಿಡತಕ್ಕದ್ದು,

**30. 56ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 56ನೇ ಪ್ರಕರಣದಲ್ಲಿ, (2)ನೇ ಉಪ ಪ್ರಕರಣದಲ್ಲಿ, ಎರಡನೇ ಪರಂತುಕಕ್ಕೆ ಈ ಮುಂದಿನದಲ್ಲಿ ಪ್ರತಿಯೋಜಿಸತಕ್ಕದ್ದು, ಎಂದರೆ :–

"ಮತ್ತು ಪರಂತು, ಯಾವೊಬ್ಬ ನಿರ್ದೇಶಕನಿಗೆ, ಮಂಡಳಿಯ ಅಥವಾ ಸಮಿತಿಯ ಅಥವಾ ಉಪ ಸಮಿತಿಗಳ ಸಭೆಗಳಿಗೆ ಹಾಜರಾಗುವುದಕ್ಕಾಗಿ ಅಥವಾ ನಿರ್ದೇಶಕನಾಗಿ ಯಾವುದೇ ಇತರ ಪ್ರಕಾರ್ಯಗಳನ್ನು ನಿರ್ವಹಿಸುವುದಕ್ಕಾಗಿ ಪ್ರಯಾಣ ಭತ್ಯೆ, ದಿನ ಭತ್ಯೆ ಅಥವಾ ಇತರ ಭತ್ಯೆಗಳ ಅಥವಾ ಫೀಜ಼ನ್ನು, ಆ ಸಂಘದ ಹಣಕಾಸಿನ ಸ್ಥಿತಿಗತಿ ಮತ್ತು ಲಾಭಗಳಿಕೆಯನ್ನು ಗಮನದಲ್ಲಿಟ್ಟುಕೊಂಡು, ಆ ಉದ್ದೇಶಕ್ಕಾಗಿ ಉಪ ವಿಧಿಗಳಲ್ಲಿ ನಿರ್ದಿಷ್ಟ ಪಡಿಸಲಾದ ಕನಿಷ್ಠ ದರಕ್ಕಿಂತ ಹೆಚ್ಚಿನ ದರದಲ್ಲಿ ಸಂದಾಯ ಮಾಡತಕ್ಕದ್ದಲ್ಲ".

**31. 57ಎ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 57ನೇ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

**"57ಎ– ಸಹಕಾರಿ ಶಿಕ್ಷಣ ಮತ್ತು ತರಬೇತಿ.–** (1) ಸಹಕಾರಿ ಶಿಕ್ಷಣ ನಿಧಿಯನ್ನು, ರಾಜ್ಯದ ಸಹಕಾರ ಚಳುವಳಿಯ ಸಂವರ್ಧನೆಯ ಉದ್ದೇಶಕ್ಕಾಗಿ ಮತ್ತು ಸಹಕಾರ ಸಂಘಗಳ ಸದಸ್ಯರು, ನಿರ್ದೇಶಕರು ಮತ್ತು ಸಹಕಾರಿ ಕಾರ್ಯಕರ್ತರಿಗೆ ಮತ್ತು ಸಾರ್ವಜನಿಕರಿಗೆ ಶಿಕ್ಷಣ ನೀಡುವುದಕ್ಕಾಗಿ ಮತ್ತು ಸಹಕಾರ ಸಂಘಗಳ ನೌಕರರಿಗೆ ತರಬೇತಿ ನೀಡುವುದಕ್ಕಾಗಿ ಬಳಸತಕ್ಕದ್ದು.

(2) ಪ್ರತಿಯೊಂದು ಸಹಕಾರ ಸಂಘವು, ತನ್ನ ವಂತಿಗೆಯನ್ನು ಕರ್ನಾಟಕ ರಾಜ್ಯ ಸಹಕಾರ ಬ್ಯಾಂಕ್ ನಿಯಮಿತದಲ್ಲಿ ಕರ್ನಾಟಕ ರಾಜ್ಯ ಸಹಕಾರ ಒಕ್ಕೂಟದ ಖಾತೆಗೆ ಅದರ ವಾರ್ಷಿಕ ಮಹಾಸಭೆಯ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಸಂದಾಯ ಮಾಡತಕ್ಕದ್ದು.

(3) ಸಹಕಾರಿ ಶಿಕ್ಷಣ ನಿಧಿಗೆ ಸಂಬಂಧಿಸಿದಂತೆ ಸಹಕಾರ ಸಂಘಗಳು ನೀಡಿದ ಎಲ್ಲ ವಂತಿಗೆಗಳನ್ನು ಭಾರತ ಸರ್ಕಾರ ಅಥವಾ ರಾಜ್ಯ ಸರ್ಕಾರಗಳಿಂದ ಸ್ವೀಕರಿಸಿದ ಅನುದಾನಗಳನ್ನು ಮತ್ತು ಯಾರೇ ವ್ಯಕ್ತಿಯು ನೀಡಿದ ದೇಣಿಗೆಗಳು ಯಾವುದಾದರೂ ಇದ್ದರೆ, ಅವುಗಳನ್ನು ಸಹಕಾರಿ ಶಿಕ್ಷಣ ನಿಧಿಗೆ ಜಮೆ ಮಾಡತಕ್ಕದ್ದು.

(4) ಸಹಕಾರಿ ಶಿಕ್ಷಣ ನಿಧಿಯನ್ನು, ನಿಯಮಿಸಬಹುದಾದಂಥ ಕಾರ್ಯಕ್ರಮಗಳಿಗಾಗಿ ಮತ್ತು ಅಂತಹ ರೀತಿಯಲ್ಲಿ ಕರ್ನಾಟಕ ರಾಜ್ಯ ಸಹಕಾರಿ ಒಕ್ಕೂಟ ನಿಯಮಿತವು ನಿರ್ವಹಿಸತಕ್ಕದ್ದು ಮತ್ತು ನಿಯಂತ್ರಿಸತಕ್ಕದ್ದು.

(5) ಸಹಕಾರ ಶಿಕ್ಷಣ ನಿಧಿಯ ಪೈಕಿ ಯಾವುದೇ ವೆಚ್ಚವನ್ನು, ನಿಯಮಿಸಬಹುದಾದ ಉದ್ದೇಶಕ್ಕಾಗಿ ರಚಿಸಲಾದ ಸಲಹಾ ಸಮಿತಿಯ ಅನುಮೋದನೆ ಪಡೆಯದೆ ಭರಿಸತಕ್ಕದ್ದಲ್ಲ.

**32. 58ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 58ನೇ ಪ್ರಕರಣದಲ್ಲಿ;

(i) (ಇ) ಖಂಡದಲ್ಲಿ,–

(ಎ) "ಅಥವಾ ಹಣಕಾಸು ಸಂಸ್ಥೆ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

(ಬಿ) "ರಿಜಿಸ್ಟ್ರಾರ್" ಎಂಬ ಪದಗಳಿಗೆ "ಮುಂದಿನ ವಾರ್ಷಿಕ ಸಾಮಾನ್ಯ ನಿಕಾಯದ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ii) ಮೊದಲನೇ ಪರಂತುಕವನ್ನು ಬಿಟ್ಟುಬಿಡತಕ್ಕದ್ದು;

**33. 59ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 59ನೇ ಪ್ರಕರಣದಲ್ಲಿ, (2)ನೇ ಉಪ–ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(2) (1)ನೇ ಉಪ–ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಒಂದು ಸಹಕಾರ ಸಂಘದ ಮಹಾಸಭೆಯು, ಆ ಮಹಾಸಭೆಯು ಠರಾವಿನಲ್ಲಿ ಗೊತ್ತುಪಡಿಸಬಹುದಾದಂಥ ಷರತ್ತುಗಳಿಗೆ ಒಳಪಟ್ಟು, ಪತ್ತಿನ ಏಜೆನ್ಸಿಯಿಂದ ಸಾಲ ತೆಗೆದುಕೊಳ್ಳಲು ಸಂಘಕ್ಕೆ ಅನುಮತಿ ನೀಡುವ ಅಧಿಕಾರವನ್ನು ಹೊಂದಿರತಕ್ಕದ್ದು:

ಪರಂತು, ಅಂಥ ಠರಾವು ಮುಂದಿನ ವಾರ್ಷಿಕ ಮಹಾಸಭೆಯವರೆಗೆ ಸಿಂಧುವಾಗಿರತಕ್ಕದ್ದು."

**34. 63ನೇ ಪ್ರಕರಣದ ಪ್ರತಿಯೋಜನೆ.–** 63ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"63. ಲೆಕ್ಕ ಪರಿಶೋಧನೆ.–** (1) ಪ್ರತಿಯೊಂದು ಸಹಕಾರ ಸಂಘವು, ಸಹಕಾರ ವರ್ಷವು ಮುಕ್ತಾಯವಾದ ತರುವಾಯ ಸೆಪ್ಟಂಬರ್ ಮೊದಲನೇ ದಿನಾಂಕಕ್ಕೆ ಮೊದಲು, ಕೊನೆ ಪಕ್ಷ ವರ್ಷಕ್ಕೊಮ್ಮೆಯಾದರೂ ತನ್ನ ಲೆಕ್ಕ ಪತ್ರಗಳನ್ನು, ಸಹಕಾರ ಲೆಕ್ಕ ಪರಿಶೋಧನಾ ನಿರ್ದೇಶಕರು ಅನುಮೋದಿಸಿದ ಲೆಕ್ಕ ಪರಿಶೋಧಕರ ಅಥವಾ ಲೆಕ್ಕ ಪರಿಶೋಧನಾ ಫರ್ಮುಗಳ ಪಟ್ಟಿಯ ಪೈಕಿಯಿಂದ ಸಹಕಾರ ಸಂಘದ ಮಹಾಸಭೆಯು ನೇಮಕ ಮಾಡಿದ ಒಬ್ಬ ಲೆಕ್ಕಪರಿಶೋಧಕನಿಂದ ಅಥವಾ ಒಂದು ಲೆಕ್ಕ ಪರಿಶೋಧನಾ ಫರ್ಮ್‌ನಿಂದ ಲೆಕ್ಕಪರಿಶೋಧನೆ ಮಾಡಿಸತಕ್ಕದ್ದು:

ಪರಂತು, ಸಹಕಾರಿ ಲೆಕ್ಕ ಪರಿಶೋಧನಾ ನಿರ್ದೇಶಕರು, ರಾಜ್ಯದಲ್ಲಿರುವ ಸಹಕಾರಿ ಸಂಘಗಳ ಲೆಕ್ಕಪತ್ರಗಳ ಪರಿಶೋಧನೆ ಕೈಗೊಳ್ಳುವುದಕ್ಕಾಗಿ ಗೊತ್ತುಪಡಿಸಿರುವ ಅರ್ಹತೆ ಮತ್ತು ಅನುಭವದ ಅಗತ್ಯತೆಯನ್ನು ಪೂರೈಸುವ ಲೆಕ್ಕಪರಿಶೋಧಕರ ಮತ್ತು ಲೆಕ್ಕಪರಿಶೋಧನಾ ಫರ್ಮುಗಳ ಒಂದು ಪಟ್ಟಿಯನ್ನು ತಯಾರಿಸಲು ಮತ್ತು ನಿರ್ವಹಿಸಲು ಸಕ್ಷಮ ಪ್ರಾಧಿಕಾರಿಯಾಗಿರತಕ್ಕದ್ದು:

ಮತ್ತು ಪರಂತು, ಸಹಕಾರಿ ಲೆಕ್ಕ ಪರಿಶೋಧನಾ ನಿರ್ದೇಶಕರು, ಪ್ರತಿಯೊಂದು ಸಹಕಾರ ಸಂಘಕ್ಕೆ, ಸಹಕಾರ ವರ್ಷದ ಮುಕ್ತಾಯದ ಮೂವತ್ತು ದಿನಗಳೊಳಗೆ, ಹತ್ತನ್ನು ಮೀರದ ಲೆಕ್ಕ ಪರಿಶೋಧಕರು ಮತ್ತು ಲೆಕ್ಕ ಪರಿಶೋಧನಾ ಫರ್ಮುಗಳಿರುವ ಒಂದು ಪಟ್ಟಿಯನ್ನು ಕಳುಹಿಸತಕ್ಕದ್ದು.

(2) ಪ್ರತಿಯೊಂದು ಸಹಕಾರ ಸಂಘದ ಮಹಾ ಸಭೆಯು ತನ್ನ ಮಹಾ ಸಭೆಯಲ್ಲಿ, ಯಾವ ಸಹಕಾರ ವರ್ಷಕ್ಕಾಗಿ ಮಹಾಸಭೆಯು ನಡೆಯುತ್ತಿದೆಯೋ ಆ ಸಹಕಾರ ವರ್ಷಕ್ಕೆ ಸಂಬಂಧಿಸಿದ ಸಂಘದ ಲೆಕ್ಕಪತ್ರಗಳ ಲೆಕ್ಕಪರಿಶೋಧನೆ ಮಾಡಲು ಒಬ್ಬ ಲೆಕ್ಕ ಪರಿಶೋಧಕನನ್ನು ಅಥವಾ ಲೆಕ್ಕ ಪರಿಶೋಧನಾ ಫರ್ಮನ್ನು ನೇಮಕ ಮಾಡತಕ್ಕದ್ದು.

(3) ಸಹಕಾರಿ ಸಂಘಗಳ ಲೆಕ್ಕ ಪರಿಶೋಧನಾ ನಿರ್ದೇಶಕರು, ಲೆಕ್ಕ ಪರಿಶೋಧಕರ ಮತ್ತು ಲೆಕ್ಕ ಪರಿಶೋಧನಾ ಫರ್ಮುಗಳ ಪಟ್ಟಿಯನ್ನು ತಯಾರಿಸುವ ರೀತಿಯು ಮತ್ತು ಪ್ರತಿಯೊಂದು ಸಹಕಾರ ಸಂಘಕ್ಕೆ ಪಟ್ಟಿಯನ್ನು ನೀಡುವ ಪ್ರಕ್ರಿಯೆಯು ನಿಯಮಿಸಬಹುದಾದಂತೆ ಇರತಕ್ಕದ್ದು.

(4) ಈ ಪ್ರಕರಣದ (1)ನೇ ಉಪಪ್ರಕರಣದ ಅಡಿಯಲ್ಲಿ ಅಥವಾ 98ಯು ಪ್ರಕರಣದ ಅಥವಾ 98ವಿ ಪ್ರಕರಣದ ಅಡಿಯಲ್ಲಿಯ ಲೆಕ್ಕ ಪರಿಶೋಧನೆಯು, ಅವಧಿ ಮೀರಿದ ಋಣಗಳು ಯಾವುದಾದರೂ ಇದ್ದರೆ ಅವುಗಳ ಪರಿಶೀಲನೆಯನ್ನು, ಆಸ್ತಿಗಳು ಮತ್ತು ಹೊಣೆಗಾರಿಕೆಗಳ ವಾಸ್ತವಿಕ ಪರಿಶೀಲನೆ ಮತ್ತು ಮೌಲ್ಯಮಾಪನವನ್ನು ನಗದು ಬಾಕಿಗಳ ಮತ್ತು ಭದ್ರತಾ ಪತ್ರಗಳ ಪರಿಶೀಲನೆಯನ್ನು ಲಾಭಗಳು ಅಥವಾ ನಷ್ಟಗಳ ಪ್ರಮಾಣಿಕರಣವನ್ನು, ನಬಾರ್ಡ್ ಅಥವಾ ಭಾರತದ ರಿಸರ್ವ್ ಬ್ಯಾಂಕಿನ ಸೂಚನೆಗಳು ಮತ್ತು ನಿರ್ದೇಶನಗಳೂ ಸೇರಿದಂತೆ ಸಹಕಾರ ಸಂಘಗಳಿಗೆ ಅನ್ವಯವಾಗುವ ಪಾರದರ್ಶಕ ಕಾನೂನು ಮತ್ತು ಇತರ ಕಾನೂನುಗಳ ಪಾಲನೆಯನ್ನು ಮತ್ತು ಸಂಘದ ಕಾರ್ಯನಿರ್ವಹಣೆಯ ಮತ್ತು ನಿಯಮಿಸಿದ ಇತರ ವಿವರಗಳ ಪರಿಶೀಲನೆಯನ್ನು ಒಳಗೊಳ್ಳುತ್ತದೆ.

(5) ಲೆಕ್ಕ ಪರಿಶೋಧಕನು ಅಥವಾ ಲೆಕ್ಕಪರಿಶೋಧನಾ ಫರ್ಮು, ಸಂಘಕ್ಕೆ ಸೇರಿದ ಅಥವಾ ಮಂಡಲಿಯು ಯಾವೊಬ್ಬ ಸದಸ್ಯನ ಅಥವಾ ಪದಾಧಿಕಾರಿಯ ಅಥವಾ ಮುಖ್ಯ ಕಾರ್ಯನಿರ್ವಾಹಕನ ಅಥವಾ ಸಂಘದ ಯಾವೊಬ್ಬ ಇತರ ಸದಸ್ಯನ ಅಭಿರಕ್ಷೆಯಲ್ಲಿರುವ ಎಲ್ಲಾ ಪುಸ್ತಕಗಳು, ಲೆಕ್ಕಪತ್ರಗಳು, ದಸ್ತಾವೇಜುಗಳು, ಕಾಗದಪತ್ರಗಳು, ಭದ್ರತೆಗಳು, ನಗದು ಮತ್ತು ಇತರ ಸ್ವತ್ತುಗಳನ್ನು ಎಲ್ಲಾ ವೇಳೆಗಳಲ್ಲಿ ನೋಡಲು ಅವಕಾಶವಿರತಕ್ಕದ್ದು ಮತ್ತು ಅಂಥ ಯಾವುದೇ ಪುಸ್ತಕಗಳು, ಲೆಕ್ಕ ಪತ್ರಗಳು, ದಸ್ತಾವೇಜುಗಳ, ಕಾಗದಪತ್ರಗಳು, ಭದ್ರತೆಗಳು, ನಗದು ಅಥವಾ ಇತರ ಸ್ವತ್ತುಗಳ ಸ್ವಾಧೀನತೆಯನ್ನು ಹೊಂದಿರುವ ಅಥವಾ ಅದರ ಜವಾಬ್ದಾರಿಯನ್ನು ಹೊಂದಿರುವ ಯಾವೊಬ್ಬ ವ್ಯಕ್ತಿಯನ್ನು, ಅವುಗಳನ್ನು ಸಂಘದ ನೋಂದಾಯಿತ ಕಚೇರಿಯಲ್ಲಿ ಅಥವಾ ಅದರ ಯಾವುದೇ ಶಾಖೆಯಲ್ಲಿ ಅಥವಾ ಸಂಘದ ಕೇಂದ್ರ ಕಚೇರಿಯ ಯಾವುದೇ ಸಾರ್ವಜನಿಕ ಕಚೇರಿಯಲ್ಲಿ ಹಾಜರುಪಡಿಸಲು ಕರೆಸಿಕೊಳ್ಳಬಹುದು.

(6) ಸಂಘದ ಒಬ್ಬ ಅಧಿಕಾರಿ ಅಥವಾ ನೌಕರನಾಗಿರುವ ಅಥವಾ ಯಾವುದೇ ಸಮಯದಲ್ಲಿ ಅಧಿಕಾರಿ ಅಥವಾ ನೌಕರನಾಗಿದ್ದಿರುವ ಪ್ರತಿಯೊಬ್ಬ ವ್ಯಕ್ತಿಯು ಮತ್ತು ಸಂಘದ ಪ್ರತಿಯೊಬ್ಬ ಸದಸ್ಯನು ಮತ್ತು ಹಿಂದಿನ ಸದಸ್ಯನು ಸಹಕಾರಿ ಲೆಕ್ಕಪರಿಶೋಧನಾ ನಿರ್ದೇಶಕರಿಂದ ಅನುಮೋದನೆ ಪಡೆದ ಲೆಕ್ಕಪರಿಶೋಧಕನು ಅಥವಾ ಲೆಕ್ಕ ಪರಿಶೋಧನಾ ಫರ್ಮುಗಳು ಸಂಘದ ವ್ಯವಹಾರಕ್ಕೆ ಮತ್ತು ಕಾರ್ಯನಿರ್ವಹಣೆಗೆ ಸಂಬಂಧಪಟ್ಟಂತೆ ಅಗತ್ಯಪಡಿಸಬಹುದಾದಂಥ ಮಾಹಿತಿಯನ್ನು ಒದಗಿಸತಕ್ಕದ್ದು.

(7) ಪ್ರತಿಯೊಂದು ಸಹಕಾರ ಸಂಘ ಮಂಡಲಿಯು, ಸಹಕಾರ ವರ್ಷದ ಕೊನೆಯಲ್ಲಿ ಇರುವಂತೆ, ನಿಯಮಿಸಬಹುದಾದ ಅಂಥ ಅನುಸೂಚಿಗಳು ಮತ್ತು ಇತರ ವಿವರಪತ್ರಗಳೊಂದಿಗೆ ಸ್ವೀಕೃತಿಗಳು ಮತ್ತು ಸಂದಾಯಗಳು ಅಥವಾ ಆದಾಯ ಮತ್ತು ವೆಚ್ಚ, ಲಾಭ ಮತ್ತು ನಷ್ಟ ಮತ್ತು ಜಮಾ ಖರ್ಚು

ಪಟ್ಟಿಗಳಂಥ ವಾರ್ಷಿಕ ಹಣಕಾಸು ತ:ಖ್ತೆಗಳನ್ನು ಸಿದ್ಧಪಡಿಸಿ ಸಹಕಾರ ವರ್ಷವು ಮುಕ್ತಾಯವಾಗುವ ಮೂವತ್ತು ದಿನಗಳೊಳಗಾಗಿ ಲೆಕ್ಕ ಪರಿಶೋಧಕನ ಅಥವಾ ಲೆಕ್ಕಪರಿಶೋಧನಾ ಫರ್ಮಿನ ಮುಂದೆ ಲೆಕ್ಕ ಪರಿಶೋಧನೆಗಾಗಿ ಹಾಜರುಪಡಿಸುವಂತೆ ನೋಡಿಕೊಳ್ಳತಕ್ಕದ್ದು.

(8) ಲೆಕ್ಕ ಪರಿಶೋಧಕನು ಅಥವಾ ಲೆಕ್ಕ ಪರಿಶೋಧನಾ ಫರ್ಮು, ಈ ಅಧಿನಿಯಮ ಅಥವಾ ನಿಯಮಗಳಲ್ಲಿ ಉಪಬಂಧಿಸಲಾದಂತೆ ಲೆಕ್ಕಪತ್ರಗಳ ಲೆಕ್ಕ ಪರಿಶೋಧನೆ ನಡೆಸತಕ್ಕದ್ದು ಮತ್ತು ಪೂರ್ಣಗೊಳಿಸತಕ್ಕದ್ದು ಮತ್ತು ಸಾಧ್ಯವಾದಷ್ಟು ಬೇಗನೆ, ಆದರೆ ಪ್ರತಿವರ್ಷದ ಸೆಪ್ಟೆಂಬರ್ ಒಂದನೇ ತಾರೀಖಿನ ಒಳಗಾಗಿ ರಿಜಿಸ್ಟ್ರಾರ್‌ಗೆ, ಸಹಕಾರಿ ಲೆಕ್ಕ ಪರಿಶೋಧನಾ ನಿರ್ದೇಶಕರಿಗೆ ಮತ್ತು ಹಣಕಾಸು ಒದಗಿಸುವ ಬ್ಯಾಂಕ್‌ಗೆ ಅಥವಾ ಪತ್ತಿನ ಏಜೆನ್ಸಿಗೆ ಮತ್ತು ಆ ಸಂಘವು ಯಾವುದೇ ಇತರ ಸಹಕಾರ ಸಂಘಕ್ಕೆ ಸಂಯೋಜನೆಗೊಂಡಿದ್ದರೆ, ಅಂಥ ಸಹಕಾರ ಸಂಘಕ್ಕೆ ಲೆಕ್ಕಪರಿಶೋಧನಾ ವರದಿಯ ಪ್ರತಿಗಳನ್ನು ಕಳುಹಿಸಿ ಲೆಕ್ಕಪರಿಶೋಧನೆಯ ಫಲಿತಾಂಶಗಳನ್ನು ತಿಳಿಸತಕ್ಕದ್ದು.

(9) ಲೆಕ್ಕ ಪರಿಶೋಧಕನು ಅಥವಾ ಲೆಕ್ಕ ಪರಿಶೋಧನಾ ಫರ್ಮುಗಳು ಸಹಕಾರಿ ಸಂಘದ ಮಹಾ ಸಭೆಗೆ ಸಂಬಂಧಪಟ್ಟ ಎಲ್ಲಾ ನೋಟೀಸುಗಳನ್ನು ಮತ್ತು ಪ್ರತಿಯೊಂದು ತಿಳುವಳಿಕೆ ಪತ್ರವನ್ನು ಸ್ವೀಕರಿಸಲು ಹಕ್ಕು ಹೊಂದಿರತಕ್ಕದ್ದು ಮತ್ತು ಆ ಸಹಕಾರ ಸಂಘದ ಖರ್ಚಿನಲ್ಲಿ ಅಂಥ ಸಭೆಗೆ ಹಾಜರಾಗಲು ಮತ್ತು ಲೆಕ್ಕ ಪರಿಶೋಧಕನಾಗಿ ಅಥವಾ ಲೆಕ್ಕ ಪರಿಶೋಧನಾ ಫರ್ಮ್ ಆಗಿ ತನಗೆ ಸಂಬಂಧಿಸಿದಂತೆ ವ್ಯವಹಾರದ ಎಲ್ಲ ಅಥವಾ ಅದರ ಯಾವುದೇ ಭಾಗಕ್ಕೆ ಸಂಬಂಧಿಸಿದಂತೆ ಮಹಾಸಭೆಯಲ್ಲಿ ಅಹವಾಲುಗಳನ್ನು ಕೇಳಲು ಹಕ್ಕು ಹೊಂದಿರತಕ್ಕದ್ದು.

(10) (1)ನೇ ಉಪ–ಪ್ರಕರಣದ ಅಡಿಯಲ್ಲಿ ನಡೆದ ಲೆಕ್ಕಪರಿಶೋಧನೆಯ ಫಲಿತಾಂಶವು, ಸಂಘದ ಕಾರ್ಯನಿರ್ವಹಣೆಯಲ್ಲಿ ಇರುವ ದೋಷಗಳನ್ನು ಬಹಿರಂಗಪಡಿಸಿದರೆ, ಮಂಡಲಿಯು, ಆ ಲೆಕ್ಕಪರಿಶೋಧನಾ ವರದಿಯಲ್ಲಿ ಎತ್ತಿ ತೋರಿಸಿರುವ ದೋಷಗಳನ್ನು ಸರಿಪಡಿಸಲು ಮತ್ತು ಅಕ್ರಮಗಳನ್ನು ಪರಿಹರಿಸಲು ಕ್ರಮಗಳನ್ನು ಕೈಗೊಳ್ಳತಕ್ಕದ್ದು ಮತ್ತು ಪ್ರತಿವರ್ಷ ಸೆಪ್ಟಂಬರ್ ತಿಂಗಳ ಇಪ್ಪತ್ತೈದನೇ ತಾರೀಖಿಗೆ ಮೊದಲು ನಡೆಯುವ ಮಹಾಸಭೆಯ ಮುಂದೆ ಕ್ರಮಕೈಗೊಂಡ ವರದಿಯ ಜೊತೆಗೆ ಲೆಕ್ಕಪರಿಶೋಧನಾ ವರದಿಯನ್ನು ಮಂಡಿಸತಕ್ಕದ್ದು ಮತ್ತು ಅಲ್ಲಿ ಸದರಿ ದೋಷಗಳು ಮತ್ತು ಅಕ್ರಮಗಳನ್ನು ವಿವರಿಸತಕ್ಕದ್ದು. ಮಂಡಳಿಯು ಲೆಕ್ಕಪರಿಶೋಧನಾ ವರದಿಯಲ್ಲಿ ಹೇಳಿರುವ ಎಲ್ಲ ದೋಷಗಳನ್ನು ಸರಿಪಡಿಸಲು ಮತ್ತು ಅಕ್ರಮಗಳನ್ನು ಪರಿಹರಿಸಲು ಕ್ರಮ ಕೈಗೊಳ್ಳುವುದನ್ನು ಮುಂದುವರೆಸತಕ್ಕದ್ದು. ಆ ಎಲ್ಲ ದೋಷಗಳನ್ನು ಸರಿಪಡಿಸುವ ವರೆಗೆ ಮತ್ತು ಅಕ್ರಮಗಳನ್ನು ಪರಿಹರಿಸುವವರೆಗೆ ಪ್ರತಿವರ್ಷ ಮಹಾಸಭೆಯಲ್ಲಿ ಆ ಬಗ್ಗೆ ಮೌಲ್ಯಮಾಪನ ಮಾಡತಕ್ಕದ್ದು. ಮಂಡಲಿಯು, ಕ್ರಮಕೈಗೊಂಡ ವರದಿಯನ್ನು ರಿಜಿಸ್ಟ್ರಾರ್‌ಗೆ ಮತ್ತು ಸಹಕಾರಿ ಲೆಕ್ಕಪರಿಶೋಧನಾ ನಿರ್ದೇಶಕರಿಗೆ ಮಹಾಸಭೆಯ ದಿನಾಂಕದಿಂದ ಮೂವತ್ತು ದಿನಗಳ ಒಳಗಾಗಿ ಕಳುಹಿಸತಕ್ಕದ್ದು.

(11) ಸಹಕಾರಿ ಲೆಕ್ಕಪರಿಶೋಧನಾ ನಿರ್ದೇಶಕರು, ಪ್ರತೀವರ್ಷ ಅಪೆಕ್ಸ್ ಸಹಕಾರಿ ಸಂಘಗಳ ಲೆಕ್ಕಪರಿಶೋಧನಾ ವರದಿಗಳನ್ನು ನಿಯಮಿಸಬಹುದಾದ ರೀತಿಯಲ್ಲಿ ವಿಧಾನಮಂಡಲದ ಮುಂದೆ ಮಂಡಿಸಲು ರಾಜ್ಯ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

(12) ನಿಯತ ಲೆಕ್ಕಪರಿಶೋಧನೆಯ ಅವಧಿಯಲ್ಲಿ ಲೆಕ್ಕಪರಿಶೋಧಕನಿಂದ ಪತ್ತೆ ಹಚ್ಚಲಾಗದ ಅಥವಾ ಯುಕ್ತವಾಗಿ ಪರಿಶೀಲಿಸಲಾಗದ ಮೇಲ್ನೋಟಕ್ಕೆ ನಿಧಿಯ ವಂಚನೆ ಅಥವಾ ದುರ್ವಿನಿಯೋಗ ಅಥವಾ ಅಪರಾಧಿಕ ದುರ್ವಿನಿಯೋಗವಾಗಿದೆಯೆಂದು ಸಹಕಾರಿ ಸಂಘದ ಮಹಾ ಸರ್ವ ಸದಸ್ಯರ ಸಭೆಗೆ ಕಂಡುಬಂದಲ್ಲಿ, ಮಹಾ ಸಭೆಯು ಸಂಘದ ಹಣಕಾಸು ಸ್ಥಿತಿಗತಿಯನ್ನು ವಾಸ್ತವಿಕವಾಗಿ ಪ್ರತಿಬಿಂಬಿಸುವ ದೃಷ್ಟಿಯಿಂದ ಸಂಘದ ಯಾವುದೇ ಲೆಕ್ಕಪತ್ರವನ್ನು ಪುನರ್ ಲೆಕ್ಕಪರಿಶೋಧಿಸಲು ಅವಕಾಶ ಕಲ್ಪಿಸುವ ನಿರ್ಣಯವನ್ನು ತೆಗೆದುಕೊಳ್ಳಬಹುದು ಮತ್ತು ಲೆಕ್ಕ ಪರಿಶೋಧನೆಗೆ ಅನ್ವಯವಾಗುವ ಅಧಿನಿಯಮ ಮತ್ತು ನಿಯಮಗಳ ಉಪಬಂಧಗಳು ಅಂಥ ಪುನರ್–ಲೆಕ್ಕಪರಿಶೋಧನೆಗೂ ಅನ್ವಯವಾಗತಕ್ಕದ್ದು.

(13) ಸಂಘದ ಲೆಕ್ಕಪತ್ರಗಳ ಪುನರ್ ಲೆಕ್ಕಪರಿಶೋಧನೆಯು ಅವಶ್ಯಕ ಅಥವಾ ಯುಕ್ತವೆಂದು ಸಹಕಾರಿ ಸಂಘವು ಸಲ್ಲಿಸಿರುವ ಅರ್ಜಿಯಿಂದ ಅಥವಾ ಅನ್ಯಥಾ ರೀತಿಯಿಂದ ರಾಜ್ಯ ಸರ್ಕಾರಕ್ಕೆ ಕಂಡುಬಂದಲ್ಲಿ, ರಾಜ್ಯ ಸರ್ಕಾರವು, ಆದೇಶದ ಮೂಲಕ ಅಂಥ ಪುನರ್ ಲೆಕ್ಕಪರಿಶೋಧನೆಗೆ ಅವಕಾಶವನ್ನು ಕಲ್ಪಿಸಬಹುದು ಮತ್ತು ಲೆಕ್ಕಪರಿಶೋಧನೆಗೆ ಅನ್ವಯವಾಗುವ ನಿಯಮಗಳೇ ಅಂಥ ಪುನರ್ ಲೆಕ್ಕಪರಿಶೋಧನೆಗೆ ಅವಕಾಶವನ್ನು ಕಲ್ಪಿಸಬಹುದು ಮತ್ತು ಲೆಕ್ಕಪರಿಶೋಧನೆಗೆ ಅನ್ವಯವಾಗುವ ನಿಯಮಗಳೇ ಅಂಥ ಪುನರ್ ಲೆಕ್ಕಪರಿಶೋಧನೆಗೂ ಅನ್ವಯವಾಗತಕ್ಕದ್ದು :

ಪರಂತು ನಿಯಮ ಲೆಕ್ಕಪರಿಶೋಧನೆಯ ಅವಧಿಯಲ್ಲಿ ಲೆಕ್ಕಪರಿಶೋದಕರಿಂದ ಅಥವಾ ಲೆಕ್ಕಪರಿಶೋಧನಾ ಸಂಸ್ಥೆಗಳಿಂದ ಪತ್ತೆಹಚ್ಚಲಾಗದ ಅಥವಾ ಯುಕ್ತವಾಗಿ ಪರೀಕ್ಷೆ ಮಾಡಲಾಗದ, ಮೇಲ್ನೋಟಕ್ಕೆ ವಂಚನೆ ಅಥವಾ ದುರ್ವಿನಿಯೋಗ ಅಥವಾ ಅಪರಾಧಿತ ದುರ್ವಿನಿಯೋಗವೆಂದು ಕಂಡುಬರುವ ಸಂದರ್ಭದಲ್ಲಿ ಅಥವಾ ಲೆಕ್ಕಪತ್ರಗಳೆಂದು ಕಂಡುಬರುವ ಸಂದರ್ಭದಲ್ಲಿ ಅಥವಾ ಲೆಕ್ಕಪತ್ರಗಳ ತಪ್ಪು ವರ್ಗೀಕರಣವಾಗಿದೆ ಎಂಬ ಸಂಧರ್ಭದಲ್ಲಿ ಅಥವಾ ಸಂಘದ ಹಣಕಾಸು ಸ್ಥಿತಿಗತಿಯನ್ನು ವಾಸ್ತವವಾಗಿ ಪ್ರತಿಬಿಂಬಸುವಂಥ ಯಾವುದೇ ಇತರ ಯುಕ್ತ ಕಾರಣಗಳ ಸಂದರ್ಭದಲ್ಲಿ ಮಾತ್ರ ಅಂಥ ಮುನರ ಲೆಕ್ಕಪರಿಶೋಧನೆಗೆ ಆದೇಶಿಸತಕ್ಕದ್ದು.

(14) (5) ಮತ್ತು (6)ನೇ ಉಪಪ್ರಕರಣಗಳ ಉಪಬಂಧಗಳಿಗೆ ಬಾಧಕವಾಗದಂತೆ, ಲೆಕ್ಕ ಪರಿಶೋಧಕನು,

(ಎ) ಭದ್ರತೆಯ ಆಧಾರದ ಮೇಲೆ ಸಹಕಾರಿ ಸಂಘಗಳು ಪಡೆದಿರುವ ಸಾಲಗಳು ಮತ್ತು ಮುಂಗಡಗಳಿಗೆ ಯುಕ್ತವಾದ ಭದ್ರತೆಯನ್ನು ಒದಗಿಸಿದಲ್ಲಿ ಮತ್ತು ಇವುಗಳ ಮೇಲಿನ ನಿಬಂಧನೆಗಳು ಸಹಕಾರಿ ಸಂಘ ಅಥವಾ ಇದರ ಸದಸ್ಯರ ಹಿತಾಸಕ್ತಿಗೆ ಭಾದಕವುಂಟು ಮಾಡದಿದ್ದಲ್ಲಿ,

(ಬಿ) ಸಹಕಾರಿ ಸಂಘಗಳ ವ್ಯವಹರಣೆಗಳು, ಸಹಕಾರಿ ಸಂಘದ ಹಿತಾಸಕ್ತಿಗೆ ಬಾಧಕವುಂಟುಮಾಡದೆ ಕೇವಲ ಮಸ್ತಕದ ನಮೂದುಗಳಾಗಿ ಬಿಂಬಿತವಾದಲ್ಲಿ,

(ಸಿ) ವೈಯಕ್ತಿಕ ವೆಚ್ಚಗಳನ್ನು ರಾಜಸ್ವ ಲೆಕ್ಕ ಖಾತೆಗೆ ವಿಧಿಸಲಾಗಿದ್ದಲ್ಲಿ;

(ಡಿ) ಹಣಕ್ಕಾಗಿ ಯಾವುದೇ ಷೇರುಗಳನ್ನು ಹಂಚಿಕೆ ಮಾಡಲಾಗಿದ್ದಲ್ಲಿ, ಅಂಥ ಹಂಚಿಕೆಯ ಸಂಬಂಧದಲ್ಲಿ ವಾಸ್ತವಿಕವಾಗಿ ಹಣವನ್ನು ಸ್ವೀಕರಿಸಿದ್ದಲ್ಲಿ ಅದನ್ನು ಸಹಕಾರಿ ಸಂಘಗಳ ಮಸ್ತಕಗಳು ಮತ್ತು ಕಾಗದಪತ್ರಗಳಲ್ಲಿ ಹೇಳಲಾಗದ್ದು, ಮತ್ತು ಲೆಕ್ಕ ಮಸ್ತಕಗಳಲ್ಲಿ ಹೇಳಲಾದಂತೆ ವಾಸ್ತವಿಕವಾಗಿ ಯಾವುದೇ ಹಣವನ್ನು ಸ್ವೀಕರಿಸದಿದ್ದಲ್ಲಿ, ಮತ್ತು ಆಯವ್ಯಯ ಪಟ್ಟಿಯು ಸರಿಯಾಗಿದೆ, ನಿಯತವಾಗಿದೆ ಮತ್ತು ತಪ್ಪಾಗಿಲ್ಲವೆಂದು ಕಂಡು ಬಂದಲ್ಲಿ; ಮತ್ತು

(ಇ) ರಿಸರ್ವ ಬ್ಯಾಂಕ್ ಅಥವಾ ರಾಷ್ಟ್ರೀಯ ಬ್ಯಾಂಕು ವಿಚಾರಣೆ ನಡೆಸಲು ಯಾವುದೇ ವಿಶೇಷ ವಿವಾದ ಅಥವಾ ವಸ್ತು ವಿಷಯವನ್ನು ಉಲ್ಲೇಖಿಸಿ, ಅದನ್ನು ಯುಕ್ತವಾಗಿ ವಿಚಾರಣೆ ಮಾಡಿ, ಅದರ ಮೇಲಿನ ವರದಿಯನ್ನು ಸಂದರ್ಭಾನುಸಾರ ರಿಸರ್ವ ಬ್ಯಾಂಕ್ ಅಥವಾ ರಾಷ್ಟ್ರೀಯ ಬ್ಯಾಂಕಿಗೆ ಸಲ್ಲಿಸಿ, ವಿಚಾರಣೆ ಮಾಡತಕ್ಕದ್ದು.

(15) ಲೆಕ್ಕಪರಿಶೋಧಕನು, ತಾನು ಪರಿಶೀಲಿಸಿದ ಲೆಕ್ಕಪತ್ರ ಮೇಲೆ ಮತ್ತು ಪ್ರತಿಯೊಂದು ಜಮಾಖರ್ಚು ಪಟ್ಟಿಯ ಮೇಲೆ ಮತ್ತು ಲಾಭ ಮತ್ತು ನಷ್ಟದ ಲೆಕ್ಕಪತ್ರದ ಮೇಲೆ ಮತ್ತು ಜಮಾಖರ್ಚು ಪಟ್ಟಿ ಅಥವಾ ಲಾಭ ಮತ್ತು ನಷ್ಟದ ಲೆಕ್ಕಪತ್ರದ ಭಾಗವಾಗಿ ಅಗತ್ಯಪಡಿಸಿದ ಅಥವಾ ಅನುಬಂಧಿಸಿದ ಪ್ರತಿಯೊಂದು ಇತರೆ ದಸ್ತಾವೇಜಿನ ಮೇಲೆ ಸಹಕಾರಿ ಸಂಘಕ್ಕೆ ವರದಿಯನ್ನು ಸಲ್ಲಿಸತಕ್ಕದ್ದು, ಈ ವರದಿಯನ್ನು ಈ ಅಧಿನಿಯಮವು ಅಗತ್ಯಪಡಿಸಿದ ಮಾಹಿತಿಯನ್ನು ಹಾಗೆ ಅಗತ್ಯಪಡಿಸಲಾದಂಥ ರೀತಿಯಲ್ಲಿ ಪಡೆದ ಮತ್ತು

(ಎ) ಜಮಾ ಖರ್ಚು ಪಟ್ಟಿಯ ಸಂದರ್ಭದಲ್ಲಿ ವರ್ಷದ ಕೊನೆಯಲ್ಲಿನ ಸಹಕಾರಿ ಸಂಘಗಳ ವ್ಯವಹಾರಗಳ ಸ್ಥಿತಿಗತಿ,

(ಬಿ) ಲಾಭ ಮತ್ತು ನಷ್ಟದ ಲೆಕ್ಕಪತ್ರಗಳ ಸಂದರ್ಭದಲ್ಲಿ ವರ್ಷದ ಲಾಭ ಮತ್ತು ನಷ್ಟ,

– ಇವುಗಳನ್ನು ಸತ್ಯವಾದ ಮತ್ತು ನ್ಯಾಯೋಚಿತವಾದ ದೃಷ್ಟಿಯೊಂದಿಗೆ, ತನ್ನ ಅಭಿಪ್ರಾಯಗಳಲ್ಲಿ ಮತ್ತು ತನಗೆ ದೊರೆತ ಉತ್ತಮ ಮಾಹಿತಿಗಳೊಂದಿಗೆ ಮತ್ತು ತನಗೆ ದೊರೆತ ವಿವರಣೆಗಳ ಅನುಸಾರವಾಗಿ ನಿರೂಪಿಸತಕ್ಕದ್ದು.

(16) ಲೆಕ್ಕಪರಿಶೋಧಕನ ವರದಿಯು,

(ಎ) ಆತನ ಲೆಕ್ಕಪರಿಶೋಧನೆಯ ಉದ್ದೇಶಕ್ಕಾಗಿ ಅವಶ್ಯಕವಾಗಿರುವಂಥ ಆತನ ತಿಳುವಳಿಕೆ ಮತ್ತು ನಂಬಿಕೆ ಪ್ರಕಾರ ಉತ್ತಮ ವಾಗಿರುವಂಥ ಎಲ್ಲಾ ಮಾಹಿತಿ ಮತ್ತು ವಿವರಣೆಗಳನ್ನು ಪಡೆದಿದ್ದಾನೇ ಎಂಬುದನ್ನು;

(ಬಿ) ಆತನ ಅಭಿಪ್ರಾಯದಲ್ಲಿ, ಲೆಕ್ಕಪತ್ರಗಳ ಯುಕ್ತ ಪುಸ್ತಕಗಳನ್ನು, ಅಂತಹ ಪುಸ್ತಕಗಳ ಈ ವರೆಗಿನ ತನ್ನ ಪರಿಶೀಲನೆಯಿಂದ ಸಹಕಾರಿ ಸಂಘ ಅವುಗಳನ್ನು ಸರಿಯಾಗಿ ನಿರ್ವಹಿಸಿದೆಯೇ ಎಂಬುದನ್ನು ಮತ್ತು ಆತನ ಲೆಕ್ಕಪರಿಶೋಧನೆಯ ಉದ್ದೇಶಕ್ಕಾಗಿ ಸಾಕಷ್ಟು ಯುಕ್ತ ವಿವರ ಪಟ್ಟಿಗಳನ್ನು, ತಾನು ಬೇಟಿನಿಡಿದ ಸಹಕಾರಿ ಸಂಘಗಳ ಶಾಖೆಗಳು ಮತ್ತು ಕಚೇರಿಯಿಂದ ಸ್ವೀಕರಿಸಲಾಗಿದೆಯೇ ಎಂಬುದನ್ನು;

(ಸಿ) ಸಹಕಾರಿ ಸಂಘದ ಲೆಕ್ಕಪರಿಶೋಧಕನನ್ನು ಹೊರತು ಪಡಿಸಿದ ವ್ಯಕ್ತಿಯು ಲೆಕ್ಕಪರಿಶೋಧಿಸಿದ ಯಾವುದೇ ಶಾಖಾ ಕಚೇರಿಯ ಲೆಕ್ಕಪತ್ರಗಳನ್ನು ಕುರಿತಾದ ವರದಿಯನ್ನು ಆತನಿಗೆ ಕಳುಹಿಸಲಾಗಿದೆಯೇ ಮತ್ತು ಲೆಕ್ಕಪರಿಶೋಧಕನ ವರದಿಯನ್ನು ಸಿದ್ಧಪಡಿಸುವಲ್ಲಿ ಸದರಿ ವರದಿಯೊಂದಿಗೆ ಆತನು ಹೇಗೆ ವ್ಯವಹರಿಸಿದ ಎಂಬುದನ್ನು;

(ಡಿ) ವರದಿಯಲ್ಲಿ ವ್ಯವಹರಿಸಲಾದ ಸಹಕಾರ ಸಂಘದ ಜಮಾಖರ್ಚು ಪಟ್ಟಿ ಮತ್ತು ಲಾಭ ನಷ್ಟದ ಲೆಕ್ಕವು, ಲೆಕ್ಕಪುಸ್ತಕಗಳು ಮತ್ತು ವಿವರಪಟ್ಟಿಗಳಿಗೆ ಅನುಸಾರವಾಗಿದೆ ಎಂಬುದನ್ನು ;

- ನಿರೂಪಿಸತಕ್ಕದ್ದು.

**(17) ಲೆಕ್ಕಪರಿಶೋಧನಾ ವರದಿಯು:–**

(ಎ) ಲೆಕ್ಕಪರಿಶೋಧನೆಯಲ್ಲಿ ಗಮನಿಸಿದ ದೋಷಗಳು ಮತ್ತು ಅಕ್ರಮಗಳ ಎಲ್ಲಾ ವಿವರಗಳನ್ನು ಹೊಂದಿರತಕ್ಕದ್ದು ಮತ್ತು ಹಣಕಾಸು ಅಕ್ರಮಗಳು ಮತ್ತು ನಿಧಿಗಳ ದುರ್ವಿನಿಯೋಗ ಅಥವಾ ಅಪರಾಧಿಕ ದುರ್ವಿನಿಯೋಗ ಅಥವಾ ವಂಚನೆಯ ಸಂದರ್ಭದಲ್ಲಿ ಲೆಕ್ಕಪರಿಶೋಧಕ/ಲೆಕ್ಕಪರಿಶೋಧನಾ ಫರ್ಮು ತನಿಖೆ ನಡೆಸತಕ್ಕದ್ದು ಮತ್ತು ಅದರ ಕಾರ್ಯ ರೀತಿ, ವಹಿಸಿಕೊಡುವಿಕೆ ಒಳಗೊಂಡ ಮೊಬಲಗಿನ ಬಗ್ಗೆ ವರದಿ ನೀಡತಕ್ಕದ್ದು ಮತ್ತು ಎಲ್ಲಾ ಅವಶ್ಯಕ ಸಾಕ್ಷಿದೊಂದಿಗೆ, ಸಂಧರ್ಭಾನುಸಾರ ಮಂಡಳಿಯ ಸದಸ್ಯರು ಅಥವಾ ಸಂಘದ ಉದ್ಯೋಗಿಗಳು ಅಥವಾ ಯಾವೊಬ್ಬ ಇತರ ವ್ಯಕ್ತಿಯ ಮೇಲೆ ಅಂಥ ದುರ್ವಿನಿಯೋಗ ಅಥವಾ ನಿಧಿಗಳ ಅಪರಾಧಿಕ ದುರ್ವಿನಿಯೋಗ ಅಥವಾ ವಂಚನೆಗೆ ಸಂಬಂಧಿಸಿದಂತೆ ಹೊಣೆಗಾರಿಕೆಯನ್ನು ನಿಗದಿಪಡಿಸತಕ್ಕದ್ದು.

(ಬಿ) ಲಾಭ ಮತ್ತು ನಷ್ಟ ಕುರಿತಾದ ಸಂವಾದಿ ಪರಿಣಾಮಗಳೊಂದಿಗೆ ವರದಿಯಲ್ಲಿ ವಿವರವಾಗಿ ಸೂಚಿಸಬೇಕಾದ ಹಣಕಾಸು ವಿವರ ಪಟ್ಟಿಗಳ ಮೇಲೆ ಲೆಕ್ಕ ಹಾಕಲಾದ ಅಕ್ರಮಗಳು ಮತ್ತು ಅವುಗಳ ಇಂಗಿತಗಳನ್ನು ಒಳಗೊಂಡಿರತಕ್ಕದ್ದು.

(ಸಿ) ಪರಿಶೀಲಿಸಬೇಕಾದ ಸಹಕಾರಿ ಸಂಘಗಳ ಸಭೆ ಮಂಡಳಿಯ ಮತ್ತು ಉಪ ಸಮಿತಿಗಳ ಕಾರ್ಯವಿಧಾನ ಮತ್ತು ಗಮನಿಸಲಾದ ಯಾವುವೆ ಅಕ್ರಮಗಳು ಉಲ್ಲಂಘನೆಗಳು ವರದಿಮಾಡಲಾದ ಅಂಥ ಅಕ್ರಮಗಳು/ ಉಲ್ಲಂಘನೆಗಳಿಗೆ ಯುಕ್ತವಾಗಿ ನಿಗದಿಗೊಳಿಸಿದ ಹೊಣೆಗಾರಿಕೆಗಳನ್ನು ವರದಿ ಮಾಡತಕ್ಕದ್ದು.

(ಡಿ) ನಿಯಮಿಸಬಹುದಾದ ಎಲ್ಲ ಪರಿಶಿಷ್ಟಗಳು ಮತ್ತು ಇತರ ವಿವರ ಪಟ್ಟಿಗಳನ್ನು ವರದಿಮಾಡತಕ್ಕದ್ದು.

(18) (14)ನೇ ಉಪಪ್ರಕರಣದ (ಎ) ಮತ್ತು (ಬಿ) ಖಂಡಗಳಲ್ಲಿ ಅಥವಾ (15) ಉಪ ಪ್ರಕರಣದ (ಎ) ಮತ್ತು (ಬಿ) ಖಂಡಗಳಲ್ಲಿ ಅಥವಾ (16) ಉಪ ಪ್ರಕರಣದ (ಎ) ಮತ್ತು (ಡಿ) ಖಂಡಗಳಲ್ಲಿ ಉಲ್ಲೇಖಿಸಿದ ಯಾವುದೇ ವಿಷಯಗಳಲ್ಲಿ ಸಕಾರಾತ್ಮಕವಾಗಿ ಉತ್ತರಿಸಿದ್ದಲ್ಲಿ ಅಥವಾ ಪರಿಗಣಿಸಬಹುದಾದ ಅಭಿಪ್ರಾಯದೊಂದಿಗೆ ಉತ್ತರಿಸಿದ್ದಲ್ಲಿ ಲೆಕ್ಕಪರಿಶೋಧಕರ ವರದಿಯು ಸದರಿ ಉತ್ತರಕ್ಕೆ ಕಾರಣವನ್ನು ಹೇಳತಕ್ಕದ್ದು.

(19) ಸಹಕಾರಿ ಸಂಘಗಳ ಲೆಕ್ಕಪರಿಶೋಧಕರು ಅಥವಾ ಲೆಕ್ಕಪರಿಶೋಧನಾ ಫರ್ಮ್‌ಗಳ ಪರಿಶ್ರಮ ಧನವನ್ನು ಸಂಘಗಳಿಂದ ಭರಿಸತಕ್ಕದ್ದು ಮತ್ತು ಅದು ಸಂಘದ ಮಹಾಸಭೆಯು ನಿಗದಿ ಪಡಿಸಬಹುದಾದಂಥ ದರಗಳಲ್ಲಿರತಕ್ಕದ್ದು.

(20) ಸಹಕಾರಿ ಲೆಕ್ಕಪರಿಶೋಧನಾ ನಿರ್ದೇಶಕರು, ಜಿಲ್ಲಾವಾರು ಸಹಕಾರಿ ಸಂಘಗಳ ಪಟ್ಟಿ, ಕಾರ್ಯನಿರ್ವಹಣಾ ಸಂಘಗಳ ಪಟ್ಟಿ ನಿಗದಿ ಪಡಿಸಬಹುದಾದ ಸಮಯದೊಳಗೆ ಮತ್ತು ಅದರ ಕಾರಣಗಳೊಂದಿಗೆ ಲೆಕ್ಕಪತ್ರಗಳ ಲೆಕ್ಕ ಪರಿಶೋಧನೆ ಮಾಡಿದಂಥ ಸಂಘಗಳ ಪಟ್ಟಿ, ಲೆಕ್ಕಪತ್ರಗಳ ಲೆಕ್ಕ ಪರಿಶೋಧನೆ ಮಾಡದಂಥ ಸಂಘಗಳ ಪಟ್ಟಿಯನ್ನು ನಿರ್ವಹಿಸತಕ್ಕದ್ದು. ಈತನು ಸಹಕಾರಿ ಸಂಘಗಳು ಮತ್ತು ಲೆಕ್ಕಪರಿಶೋಧಕರು ಮತ್ತು ಲೆಕ್ಕಪರಿಶೋಧನಾ

ಸಂಸ್ಥೆಗಳೊಂದಿಗೆ ಸಹಕರಿಸತಕ್ಕದ್ದು ಮತ್ತು ಪ್ರತೀ ವರ್ಷ ಸಕಾಲದಲ್ಲಿ ಎಲ್ಲ ಸಹಕಾರಿ ಸಂಘಗಳ ಲೆಕ್ಕಪತ್ರಗಳ ಲೆಕ್ಕಪರಿಶೋಧನೆಯನ್ನು ಪೂರ್ಣಗೊಳಿಸುವುದನ್ನು ಖಚಿತ ಪಡಿಸತಕ್ಕದ್ದು.

**ವಿವರಣೆ:**– ಈ ಪ್ರಕರಣದ ಉದ್ದೇಶಕ್ಕಾಗಿ,–

(i) 'ಲೆಕ್ಕ ಪರಿಶೋಧಕ' ಎಂದರೆ, ಪದವಿ ಅಥವಾ ಸ್ನಾತಕೋತ್ತರ ಪದವಿಯ ಜೊತೆಗೆ ಸಹಕಾರ ಸಂಘಗಳ ವ್ಯವಸ್ಥಾಪನೆಯಲ್ಲಿ ಉನ್ನತ ಡಿಪ್ಲೊಮೊ/ಸಹಕಾರ ಸಂಘಗಳ ಲೆಕ್ಕ ಪರಿಶೋಧನೆಯಲ್ಲಿ ಡಿಪ್ಲೋಮೊ/ಸಹಕಾರ ಸಂಘ ವ್ಯವಸ್ಥಾಪನೆಯಲ್ಲಿ, ಸಾಮಾನ್ಯ ಡಿಪ್ಲೊಮೊದಲ್ಲಿ ಉತ್ತೀರ್ಣನಾಗಿರುವ ಮತ್ತು ಪ್ರೊಬೇಷನ್ ಅವಧಿಯನ್ನು ಯಶಸ್ವಿಯಾಗಿ ಪೂರ್ಣಗೊಳಿಸಿರುವ ಮತ್ತು ಕನ್ನಡ ಭಾಷೆಯಲ್ಲಿ ವ್ಯವಹರಿಸುವ ಜ್ಞಾನವನ್ನು ಹೊಂದಿರುವಂಥ ಒಬ್ಬ ಲೆಕ್ಕ ಪರಿಶೋದಕ ಅಥವಾ ಸಹಕಾರಿ ಲೆಕ್ಕ ಪರಿಶೋಧನಾ ಇಲಾಖೆಯ ಒಬ್ಬ ಅಧಿಕಾರಿ; ಅಥವಾ ಸಹಕಾರ ಸಂಘಗಳ ಕಾರ್ಯನಿರ್ವಹಣೆಯ ಬಗ್ಗೆ ಯುಕ್ತ ತಿಳುವಳಿಕೆಯನ್ನು ಹೊಂದಿರುವ ಮತ್ತು ಪಟ್ಟಿಯಲ್ಲಿ ಸೇರಿಸುವ ಸಂಭವಿರುವ ಲೆಕ್ಕಪರಿಶೋಧನಾ ಫರ್ಮಿನ ಲೆಕ್ಕಪರಿಶೋಧನೆಯ ಸಂಬಂಧದಲ್ಲಿ, ಅಂಥ ವಿಧದ ಸಹಕಾರ ಸಂಘಗಳ ಲೆಕ್ಕಪರಿಶೋಧನೆಯಲ್ಲಿ ಕೊನೆಪಕ್ಷ ಮೂರು ವರ್ಷಗಳ ಅನುಭವವನ್ನು ಹೊಂದಿರುವ ಚಾರ್ಟರ್ಡ್ ಅಕೌಂಟೆಂಟರ ಅಧಿನಿಯಮ, 1949ರ ಅರ್ಥ ವ್ಯಾಪ್ತಿಯಲ್ಲಿ ಬರುವ ಒಬ್ಬ ಚಾರ್ಟರ್ಡ್ ಅಕೌಂಟೆಂಟ್ ಎಂದು ಸಹ ಅರ್ಥ ಮತ್ತು ಚಾರ್ಟರ್ಡ್ ಅಕೌಂಟೆಂಟರು ಕನ್ನಡ ಭಾಷೆಯಲ್ಲಿ ವ್ಯವಹರಿಸುವ ಜ್ಞಾನವನ್ನು ಹೊಂದಿರತಕ್ಕದ್ದು.

(ii)'ಲೆಕ್ಕ ಪರಿಶೋಧನಾ ಫರ್ಮ್' ಎಂದರೆ, ಸಹಕಾರ ಸಂಘಗಳ ಕಾರ್ಯನಿರ್ವಹಣೆಯ ಬಗ್ಗೆ ಯುಕ್ತ ಜ್ಞಾನವನ್ನು ಹೊಂದಿರುವ ಮತ್ತು ಪಟ್ಟಿಯಲ್ಲಿ ಸೇರಿಸುವ ಸಂಭವವಿರುವ ಲೆಕ್ಕ ಪರಿಶೋಧನಾ ಫರ್ಮಿನ ಲೆಕ್ಕ ಪರಿಶೋಧನೆಯ ಸಂಬಂಧದಲ್ಲಿ ಅಂಥ ವಿಧದ ಸಹಕಾರ ಸಂಘಗಳ ಲೆಕ್ಕ ಪರಿಶೋಧನೆಯಲ್ಲಿ ಕೊನೇ ಪಕ್ಷ ಮೂರು ವರ್ಷಗಳ ಅನುಭವ ಹೊಂದಿರುವ ಚಾರ್ಟರ್ಡ್ ಅಕೌಂಟೆಂಟರ ಅಧಿನಿಯಮ, 1949ರ ಅರ್ಥ ವ್ಯಾಪ್ತಿಯೊಳಗೆ ಬರುವ ಒಂದು ಅಥವಾ ಹೆಚ್ಚು ಚಾರ್ಟರ್ಡ್ ಅಕೌಂಟೆಂಟರು ಮತ್ತು ಚಾರ್ಟರ್ಡ್ ಅಕೌಂಟೆಂಟರು ಕನ್ನಡ ಭಾಷೆಯಲ್ಲಿ ವ್ಯವಹರಿಸುವ ಜ್ಞಾನವನ್ನು ಹೊಂದಿರತಕ್ಕದ್ದು."

**35. 64ನೇ ಪ್ರಕರಣದ ತಿದ್ದುಪಡಿ.**– ಮೂಲ ಅಧಿನಿಯಮದ 64ನೇ ಪ್ರಕರಣದಲ್ಲಿ,–

(i) (2ಎ) ಉಪಪ್ರಕರಣದ ತರುವಾಯ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ರಿಜಿಸ್ಟ್ರಾರನು ನೀಡಿದ ವರದಿಯ ಮೇಲೆ, ವಿಚಾರಣಾ ಅವಧಿಯನ್ನು ವಿಸ್ತರಿಸಲು ಸಮಂಜಸ ಕಾರಣಗಳಿವೆ ಎಂದು ರಾಜ್ಯ ಸರ್ಕಾರಕ್ಕೆ ಮನದಟ್ಟಾದರೆ, ಅದು ಹದಿನೆಂಟು ತಿಂಗಳ ಅವಧಿಯನ್ನು ಮೀರಿ ವಿಚಾರಣೆ ನಡೆಸುವ ಅವಧಿಯನ್ನು ವಿಸ್ತರಿಸುವ ಅಧಿಕಾರ ಹೊಂದಿರತಕ್ಕದ್ದು;

(ii) (3) ನೇ ಉಪಪ್ರಕರಣದಲ್ಲಿ, (ಬಿ) ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಬಿ) ವಿಚಾರಣಾಧಿಕಾರಿಯು, ಸಂದರ್ಭಾನುಸಾರ ಹಣಕಾಸು ಬ್ಯಾಂಕಿನ ಅಥವಾ ಸಾಲ ಏಜೆನ್ಸಿಯ ಯಾರೇ ಅಧಿಕಾರಿಯನ್ನು ಅಥವಾ ಸಂಘದೊಂದಿಗೆ ಯಾವುದೇ ರೀತಿಯ ವ್ಯವಹಾರ ಸಂಬಂಧವನ್ನು ಹೊಂದಿರುವ ಯಾರೇ ವ್ಯಕ್ತಿಯನ್ನು ಅಥವಾ ಸಂಘದ ವ್ಯವಹಾರಗಳ ಕಾರ್ಯನಿರ್ವಹಣೆಯೊಂದಿಗೆ ಸಂಬಂಧಹೊಂದಿರುವ ಅಥವಾ ಅದರ ಬಗ್ಗೆ ತಿಳಿವಳಿಕೆಹೊಂದಿರುವ ಯಾರೇ ವ್ಯಕ್ತಿಯನ್ನು, ಸಂಘದ ವ್ಯವಹಾರಗಳೊಂದಿಗೆ ಅಥವಾ ಕಾರ್ಯನಿರ್ವಹಣೆಯೊಂದಿಗೆ ಸಂಬಂಧಹೊಂದಿರುವ ದಾಖಲೆಗಳು ಅಥವಾ ದಸ್ತಾವೇಜುಗಳು ಯಾವುವಾದರೂ ಇದ್ದರೆ ಅವುಗಳನ್ನು ವಿಚಾರಣೆಯ ಉದ್ದೇಶಕ್ಕಾಗಿ ವಿಚಾರಣಾಧಿಕಾರಿಯು ಅಗತ್ಯಪಡಿಸಬಹುದಾದಂತೆ ಸಂಘದ ನೋಂದಾಯಿತ ಕಚೇರಿಯಲ್ಲಿ ಅಥವಾ ಶಾಖಾ ಕಚೇರಿಯಲ್ಲಿ ಅಥವಾ ಸಂಘದ ಕೇಂದ್ರ ಕಾರ್ಯ ಸ್ಥಾನದಲ್ಲಿರುವ ಯಾವುದೇ ಸಾರ್ವಜನಿಕ ಕಚೇರಿಯಲ್ಲಿ ಹಾಜರುಪಡಿಸಲು ಮತ್ತು ಅಂಥ ಮಾಹಿತಿ ಅಥವಾ ವಿವರಣೆಗಳನ್ನು ಒದಗಿಸಲು ಸಮನ್ ಮಾಡಬಹುದು."

(iii) (4)ನೇ ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(4ಎ) ವಿಚಾರಣಾ ವರದಿಯನ್ನು ಮತ್ತು ರಿಜಿಸ್ಟ್ರಾರನಿಂದ ಫಲಿತಾಂಶವನ್ನು ಸ್ವೀಕರಿಸಿದ ತರುವಾಯ, ಅದರಲ್ಲಿ ನ್ಯೂನತೆಗಳು ಯಾವುವಾದರೂ ಇದ್ದರೆ ಅವುಗಳನ್ನು ಸರಿಪಡಿಸಲು ಮತ್ತು ಆ ಉದ್ದೇಶಕ್ಕಾಗಿ ಕರೆಯಲಾದ ವಾರ್ಷಿಕ ಮಹಾ ಸಭೆಯ ಮುಂದೆ ಅಥವಾ ವಿಶೇಷ ಮಹಾಸಭೆಯ ಮುಂದೆ ವರದಿಯನ್ನು ಮಂಡಿಸಲು ಕೂಡಲೇ ಅಗತ್ಯಕ್ರಮ ಕೈಗೊಳ್ಳವುದು ಮಂಡಲಿಯ ಜವಾಬ್ದಾರಿಯಾಗಿರತಕ್ಕದ್ದು:

ಪರಂತು, ಸಹಕಾರ ಸಂಘದ ಸಾಮಾನ್ಯ ನಿಕಾಯವು ವಿಚಾರಣಾ ನಿರ್ಣಯಗಳಿಗೆ ವಿರುದ್ಧವಾದ ಠರಾವನ್ನು ಅಂಗೀಕರಿಸಲು ಸಕ್ಷಮವಾಗಿರತಕ್ಕದ್ದಲ್ಲ".

(iv) (5)ನೇ ಉಪಪ್ರಕರಣದಲ್ಲಿ "ಮೂರು ತಿಂಗಳು" ಎಂಬ ಪದಗಳಿಗೆ "ನಲವತ್ತೈದು ದಿನಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು."

**36. 65ನೇ ಪ್ರಕರಣದ ತಿದ್ದುಪಡಿ.**– ಮೂಲ ಅಧಿನಿಯಮದ 65ನೇ ಪ್ರಕರಣದಲ್ಲಿ,–

(i) (2)ನೇ ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

(2ಎ) ರಿಜಿಸ್ಟ್ರಾರನಿಂದ ತಪಾಸಣಾ ವರದಿಯನ್ನು ಮತ್ತು ತಪಾಸಣಾ ಫಲಿತಾಂಶವನ್ನು ಸ್ವೀಕರಿಸಿದ ತರುವಾಯ, ಅದರಲ್ಲಿ ದೋಷಗಳು ಯಾವುವಾದರೂ ಇದ್ದರೆ ಅವುಗಳನ್ನು ಸರಿಪಡಿಸಲು ಮತ್ತು ಆ ಉದ್ದೇಶಕ್ಕಾಗಿ ಕರೆಯಲಾದ ವಾರ್ಷಿಕ ಮಹಾಸಭೆಯ ಮುಂದೆ ಅಥವಾ ವಿಶೇಷ ಮಹಾ ಸಭೆಯ ಮುಂದೆ ವರದಿಯನ್ನು ಮಂಡಿಸಲು ಕೂಡಲೇ ಅವಶ್ಯಕ್ರಮ ಕೈಗೊಳ್ಳವುದು ಮಂಡಲಿಯ ಜವಾಬ್ದಾರಿಯಾಗಿರತಕ್ಕದ್ದು:

ಪರಂತು, ಸಹಕಾರ ಸಂಘಗಳ ಸಾಮಾನ್ಯ ನಿಕಾಯವು ವಿಚಾರಣಾ ನಿರ್ಣಯಗಳಿಗೆ ವಿರುದ್ಧವಾದ ಠರಾವನ್ನು ಅಂಗೀಕರಿಸಲು ಸಕ್ಷಮವಾಗಿರತಕ್ಕದ್ದಲ್ಲ".

(ii) (3)ನೇ ಉಪಪಕ್ರಣದಲ್ಲಿ,–

(ಎ) "ವಿಚಾರಣೆ" ಎಂಬ ಪದವು ಬರುವಲ್ಲೆಲ್ಲಾ ಅದಕ್ಕೆ "ತಪಾಸಣೆ" ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು ;

(ಬಿ) "ಮೂರು ತಿಂಗಳು" ಎಂಬ ಪದಗಳಿಗೆ "ನಲವತ್ತೈದು ದಿನಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**37. 68ನೇ ಪ್ರಕರಣದ ತಿದ್ದುಪಡಿ.–** 68ನೇ ಪ್ರಕರಣದಲ್ಲಿ,–

(i) (1)ನೇ ಉಪಪ್ರಕರಣದಲ್ಲಿ,

(ಎ) "ನ್ಯೂನತೆಗಳನ್ನು ಸರಿಪಡಿಸಲು" ಎಂಬ ಪದಗಳಿಗೆ "ನ್ಯೂನತೆಗಳನ್ನು ಸರಿಪಡಿಸಲು ಮತ್ತು ಅಕ್ರಮಗಳನ್ನು ಪರಿಹರಿಸಲು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ಬಿ) "63ನೇ ಪ್ರಕರಣದ ಮೇರೆಗಿನ ಲೆಕ್ಕ ಪರಿಶೋಧನೆಯಲ್ಲಿ" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

(ii) (3) ನೇ ಉಪ ಪ್ರಕರಣದಲ್ಲಿ, "ಅವಶ್ಯವಿರುವೆಡೆ ಸೇರಿಸಲು ಕ್ರಮಕೈಗೊಳ್ಳತಕ್ಕದ್ದು" ಎಂಬ ಪದಗಳಿಗೆ "ಸೇರಿಸಲು ಸಂಘದ ಲೆಕ್ಕಪತ್ರಗಳನ್ನು ಪರಿಶೋಧಿಸುವ ಸಂಘ ಅಥವಾ ಲೆಕ್ಕಪರಿಶೋಧಕ ಅಥವಾ ಲೆಕ್ಕಪರಿಶೋಧಕ ಅಥವಾ ಲೆಕ್ಕಪರಿಶೋಧನಾ ಫರ್ಮಿಗೆ ಮಾಹಿತಿ ನೀಡತಕ್ಕದ್ದು." ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**38. 69ನೇ ಪ್ರಕರಣದ ತಿದ್ದುಪಡಿ,–** ಮೂಲ ಅಧಿನಿಯಮದ 69ನೇ ಪ್ರಕರಣದಲ್ಲಿ, (4)ನೇ ಉಪಪ್ರಕರಣದ ತರುವಾಯ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ರಾಜ್ಯ ಸರ್ಕಾರವು, ರಿಜಿಸ್ಟ್ರಾರನು ಮಾಡಿದ ವರದಿಯ ಮೇಲೆ ವಿಸ್ತರಣೆಗೆ ನ್ಯೆಜ ಅಥವಾ ಸಮಂಜಸ ಅಧಾರಗಳಿವೆ ಎಂದು ಅದಕ್ಕೆ ಮನದಟ್ಟಾದರೆ, ಹದಿನೆಂಟು ತಿಂಗಳುಗಳಿಗೆ ಮೀರಿದ ಅವಧಿಗೆ ವಿಸ್ತರಿಸಬಹುದು."

**39. 70ನೇ ಪ್ರಕರಣದ ತಿದ್ದುಪಡಿ,–** ಮೂಲ ಅಧಿನಿಯಮದ 70ನೇ ಪ್ರಕರಣದಲ್ಲಿ.–

(i) (1)ನೇ ಉಪಪ್ರಕರಣದಲ್ಲಿ "ಯಾವುದೇ ವಿವಾದವು" ಎಂಬ ಪದಗಳ ಮುಂಚೆ "ಮಂಡಳಿಯ ಚುನಾವಣೆ ಮತ್ತು ಚುನಾವಣಾ ಪದಾಧಿಕಾರಿಗಳ ಚುನಾವಣೆಗೆ ಸಂಬಂಧಿಸಿದ ವಿವಾದವನ್ನು ಹೊರತುಪಡಿಸಿ" ಎಂಬ ಪದಗಳನ್ನು ಸೇರಿಸತಕ್ಕದ್ದು.

(ii) (2)ನೇ ಉಪಪ್ರಕರಣದಲ್ಲಿ ಖಂಡ (ಸಿ)ಯನ್ನು ಬಿಟ್ಟುಬಿಡತಕ್ಕದ್ದು;

(iii) (3)ನೇ ಉಪಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು ಎಂದರೆ:–

"(4) ಮಂಡಳಿಯ ಸದಸ್ಯರ ಚುನಾವಣೆಗೆ ಮತ್ತು ಅಧ್ಯಕ್ಷ, ಉಪಾಧ್ಯಕ್ಷ, ಚೇರಮನ್, ವೈಸ್‌ಚೇರಮೆನ್ ಅಥವಾ ಯಾವುದೇ ಇತರ ಪದಾಧಿಕಾರಿಯ ಚುನಾವಣೆಗೆ ಸಂಬಂಧಿಸಿದ ಎಲ್ಲಾ ವಿವಾದಗಳನ್ನು ಅಧಿಕಾರ ವ್ಯಾಪ್ತಿ ಸಿವಿಲ್ ನ್ಯಾಯಾಲಯದಲ್ಲಿ ದಾಖಲು ಮಾಡತಕ್ಕದ್ದು.

(5) ಸಹಕಾರಿ ಚುನಾವಣಾ ಆಯೋಗದ ರಚನೆಯಾದ ದಿನಾಂಕದಂದು ರಿಜಿಸ್ಟ್ರಾರನಲ್ಲಿ ಬಾಕಿ ಇರುವ ಎಲ್ಲಾ ವಿವಾದಗಳನ್ನು, ಈ ತಿದ್ದುಪಡಿಯನ್ನು ಮಾಡಲಾಗಿಲ್ಲ ಎಂಬಂತೆ, ರಿಜಿಸ್ಟ್ರಾರನು ವಿಲೆ ಮಾಡತಕ್ಕದ್ದು."

**40. 71ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 71ನೇ ಪ್ರಕರಣದಲ್ಲಿ, (5)ನೇ ಉಪಪ್ರಕರಣದ ತರುವಾಯ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:-

ಪರಂತು, ರಾಜ್ಯ ಸರ್ಕಾರವು, ರಿಜಿಸ್ಟ್ರಾರನು ಮಾಡಿದ ವರದಿಯ ಮೇಲೆ ಅಂಥ ವಿಸ್ತರಣೆಗೆ ನ್ಯೆಜ ಅಥವಾ ಸಮಂಜಸ ಅಧಾರಗಳಿವೆ ಎಂದು ಅದಕ್ಕೆ ಮನದಟ್ಟಾದರೆ, ಹದಿನೆಂಟು ತಿಂಗಳುಗಳಿಗೆ ಮೀರಿದ ಅವಧಿಗೆ ವಿಸ್ತರಿಸಬಹುದು."

**41. 72ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 72ನೇ ಪ್ರಕಣದಲ್ಲಿ,–

(i) (1)ನೇ ಉಪಪ್ರಕರಣದಲ್ಲಿ,

(ಎ) "64ನೇ ಪ್ರಕರಣದ ಮೇರೆಗೆ" ಎಂಬ ಪದಗಳಿಗೆ ಮಂಚೆ "63ನೇ ಪ್ರಕರಣದ ಅಡಿಯಲ್ಲಿ ನಡೆಸಲಾದ ಲೆಕ್ಕಪರಿಶೋಧನೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ಬಿ) "ಆದೇಶವನ್ನು ಮಾಡಬಹುದು" ಎಂಬ ಪದಗಳಿಗೆ ಮುಂಚೆ "ಸಹಕಾರಿಗೆ ತನ್ನ ಮನವಿಯನ್ನು ಮಾಡಲು ಅವಕಾಶವನ್ನು ನೀಡಿದ ತರುವಾಯ" ಎಂಬ ಪದಗಳನ್ನು ಸೇರಿಸತಕ್ಕದ್ದು.

(ii) (2ನೇ) ಉಪಪ್ರಕರಣದಲ್ಲಿ (ಬಿ) ಖಂಡದಲ್ಲಿ "ಅಥವಾ ಕಾರ್ಯವನ್ನು ನಿಲ್ಲಿಸಿರುವಲ್ಲಿ" ಎಂಬ ಪದಗಳಿಗೆ "ಅವರ ನೋಂದಣಿಯ ದಿನಾಂಕದ ಆರು ತಿಂಗಳುಗಳೊಳಗೆ ಅಥವಾ ಆರು ತಿಂಗಳುಗಳಿಗೆ ಕಾರ್ಯವನ್ನು ನಿಲ್ಲಿಸಿರುವಲ್ಲಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(iii) (4)ನೇ ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(5) ಈ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ರಿಜಿಸ್ಟ್ರಾರನು, ಸಂಘದ ಸಾಮಾನ್ಯ ಸಭೆಯಲ್ಲಿ, ಸಾಮಾನ್ಯ ಸಭೆಯಲ್ಲಿ ಮೂರನೇ ಎರಡು ಬಹುಮತವುಳ್ಳ ಸದಸ್ಯರು ಹಾಜರಿದ್ದು ಮತದಾನ ಮಾಡಿ, ಹೊರಡಿಸಿದ ಗೊತ್ತುವಳಿಯ ಮೂಲಕ, ಆ ಸಂಘವನ್ನು ಸಮಾಪನಗೊಳಿಸುವುದಕ್ಕೆ ನಿರ್ಧಾರ ಕೈಗೊಂಡಿದ್ದರೆ, ಸಹಕಾರ ಸಂಘವನ್ನು ಸಮಾಪನಗೊಳಿಸುವುದಕ್ಕಾಗಿ ಆದೇಶವನ್ನು ಮಾಡತಕ್ಕದ್ದು."

**42. 98ಬಿ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 98ನೇ ಪ್ರಕರಣದಲ್ಲಿ "ಆಧ್ಯಾರೋಹಿ ಪರಿಣಾಮವನ್ನು ಹೊಂದಿರತಕ್ಕದ್ದು" ಎಂಬ ಪದಗಳಿಗೆ ಮುಂಚೆ "12, 16, 17, 19ಎ, 20, 27, 27ಎ, 27ಬಿ, 28, 28ಎ, 29ಸಿ, 29ಇ, 29ಎಫ್, 29ಜಿ, 29ಎಚ್, 30, 31, 39ಎ, 39ಎಎ, 56, 57ಎ, 63, 64, 65, 70, 72, 108 ಮತ್ತು 109ನೇ ಪ್ರಕರಣಗಳ ಉಪಬಂಧಗಳನ್ನು ಹೊರತುಪಡಿಸಿ" ಎಂಬ ಪದಗಳನ್ನು ಸೇರಿಸತಕ್ಕದ್ದು.

**43. 98ಪಿ ಪ್ರಕರಣವನ್ನು ಬಿಟ್ಟುಬಿಡುವುದು.–** ಮೂಲ ಅಧಿನಿಯಮದ 98ಪಿ ಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

**44. 98ಟಿ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 98ಟಿ ಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

**45. 105ಎ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 105ನೇ ಪ್ರಕರಣದಲ್ಲಿ,–

(i) (1)ನೇ ಉಪಪ್ರಕರಣದಲ್ಲಿ "ರಿಜಿಸ್ಟ್ರಾರನಿಗೆ" ಎಂಬ ಪದಕ್ಕೆ "ಸಾಮಾನ್ಯ ಸಭೆಗೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ii) (3)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು. ಎಂದರೆ;

"(3) ಸಹಕಾರಿ ಸಂಘದ ಸಾಮಾನ್ಯ ಸಭೆಯು, ಸಂಬಂಧಪಟ್ಟ ವ್ಯಕ್ತಿಗೆ ತನ್ನ ಮನವಿಯನ್ನು, ಯಾವುದಾದರೂ ಇದ್ದಲ್ಲಿ, ಅದನ್ನು ಲಿಖಿತದಲ್ಲಿ,\ ಮಾಡಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಿದ ತರುವಾಯ ಮತ್ತು ಮಂಡಳಿಯು ಸದಸ್ಯತ್ವವನ್ನು ನಿರಾಕರಿಸಲು ಕಾರಣಗಳನ್ನು ಪರಿಗಣಿಸಿದ ತರುವಾಯ, ಸಹಕಾರ ಸಂಘವು ಆ ವ್ಯಕ್ತಿಯನ್ನು ಸದಸ್ಯನನ್ನಾಗಿ ಸೇರಿಸಿಕೊಳ್ಳತಕ್ಕದ್ದೆಂದು ಆಗಲಿ ಅಥವಾ ಸಹಕಾರ ಸಂಘವು ಆತನನ್ನು ಪ್ರವೇಶವನ್ನು ಮಾಡತಕ್ಕದ್ದಲ್ಲವೆಂಬುದಾಗಲಿ ನಿರ್ದೇಶಿಸಬಹುದು, ಮತ್ತು ಮೊದಲ ಸಂದರ್ಭದಲ್ಲಿ, ಮಂಡಳಿಯ, ಸಾಮಾನ್ಯಸಭೆಯ ಗೊತ್ತುವಳಿಯ ಹತ್ತು ದಿನಗಳೊಳಗೆ ನಿರ್ಧಾರವನ್ನು ಜಾರಿಗೊಳಿಸತಕ್ಕದ್ದು."

(iii) (4) ಮತ್ತು (5)ನೇ ಉಪಪ್ರಕರಣವನ್ನು ಬಿಟ್ಟುಬಿಡತಕ್ಕದ್ದು,

**46. 106ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ (5)ನೇ ಉಪಪ್ರಕರಣದ ತರುವಾಯ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ರಾಜ್ಯ ಸರ್ಕಾರವು, ರಿಜಿಸ್ಟ್ರಾರನು ಮಾಡಿದ ವರದಿಯ ಮೇಲೆ ವಿಸ್ತರಣೆಗೆ ನೈಜ ಅಥವಾ ಸಮಂಜಸ ಆಧಾರಗಳಿವೆ ಎಂದು ಅದಕ್ಕೆ ಮನದಟ್ಟಾದರೆ, ಹದಿನೆಂಟು ತಿಂಗಳುಗಳಿಗೆ ಮೀರಿದ ಅವಧಿಗೆ ವಿಸ್ತರಿಸಬಹುದು."

**47. 108ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 108ನೇ ಪ್ರಕರಣದಲ್ಲಿ, "106ನೇ ಪ್ರಕರಣದ ಮೇರೆಗೆ ರಾಜ್ಯ ಸರ್ಕಾರಕ್ಕೆ ಸಲ್ಲಿಸಿದ ಅಪೀಲಿಗೆ" ಎಂಬ ಪದಗಳಿಗೆ "106ನೇ ಪ್ರಕರಣದ ಅಡಿಯಲ್ಲಿ ರಾಜ್ಯ ಸರ್ಕಾರಕ್ಕೆ ಅಥವಾ ಇತರ ಪ್ರಾಧಿಕಾರಗಳಿಗೆ ಸಲ್ಲಿಸಿದ ಅಪೀಲಿಗೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**48. 109ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 109ನೇ ಪ್ರಕರಣದಲ್ಲಿ, (16)ನೇ ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(17) ಗೊತ್ತುಪಡಿಸಿದ ಅವಧಿಯೊಳಗೆ 63ನೇ ಪ್ರಕರಣದ ಅನ್ವಯ ಲೆಕ್ಕಪರಿಶೋಧಕನು ಅಗತ್ಯಪಡಿಸಿದ ಲೆಕ್ಕಪತ್ರಗಳು ಮತ್ತು ಮಾಹಿತಿಯನ್ನು ಸಲ್ಲಿಸಲು ತಪ್ಪಿದ ಮಂಡಳಿಯ ಸದಸ್ಯರು ಮತ್ತು ಮುಖ್ಯಕಾರ್ಯನಿರ್ವಾಹಕನು, ಆರು ತಿಂಗಳುಗಳ ಅವಧಿಯವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ದಂಡದಿಂದ ಅಥವಾ ಇವೆರಡರಿಂದಲೂ ದಂಡನೀಯನಾಗತಕ್ಕದ್ದು.

(18) ಗೊತ್ತುಪಡಿಸಿದ ಅವಧಿಯೊಳಗೆ 63ನೇ ಪ್ರಕರಣದ ಅನ್ವಯ ಹಿಂದಿನ ವರ್ಷಕ್ಕಾಗಿನ ತನ್ನ ಲೆಕ್ಕಪತ್ರಗಳನ್ನು ಪರಿಶೋಧನೆಗೊಳಿಸಲು ಮತ್ತು ವಾರ್ಷಿಕ ಸಾಮಾನ್ಯ ಸಭೆಯ ಮುಂದೆ ಅದನ್ನು ಹಾಜರುಪಡಿಸಲು ತಪ್ಪಿದ, ಮಂಡಳಿಯ ಪತ್ರಿಯೊಬ್ಬ ಸದಸ್ಯ ಮತ್ತು ಮುಖ್ಯ ಕಾರ್ಯನಿರ್ವಾಹಕನು, ಆರು ತಿಂಗಳುಗಳವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ಅಥವಾ ಹತ್ತು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಹುದಾದ ದಂಡದಿಂದ ಅಥವಾ ಇವೆರಡರಿಂದಲೂ ದಂಡನೀಯನಾಗತಕ್ಕದ್ದು.

(19) 27ಬಿ ಪ್ರಕರಣದ ಮೇರೆಗೆ ಮಂಡಳಿಯ ಪ್ರತಿಯೊಬ್ಬ ಸದಸ್ಯ ಮತ್ತು ಮುಖ್ಯ ಕಾರ್ಯ ನಿರ್ವಾಹಕನು ರಿಜಿಸ್ಟ್ರಾರರವರ ಜೊತೆಯಲ್ಲಿ ವಾರ್ಷಿಕ ವಿವರಪಟ್ಟಿಗಳನ್ನು ಸಲ್ಲಿಸಲು ವಿಫಲವಾದಲ್ಲಿ, ಆರು ತಿಂಗಳುಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಐದು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡನೀಯನಾಗತಕ್ಕದ್ದು;

(20) ಸಕಾಲದಲ್ಲಿ ಅವಶ್ಯಕ ಪುಸ್ತಕಗಳನ್ನು ಮತ್ತು ಮಾಹಿತಿಯನ್ನು ಒದಗಿಸಲು ಮತ್ತು 39ಎಎ ಪ್ರಕರಣದಡಿಯಲ್ಲಿ ನಿರ್ದಿಷ್ಟಪಡಿಸಿದ ಸಮಯದೊಳಗೆ ಚುನಾವಣೆಗಳನ್ನು ನಡೆಸಲು ಸಹಕಾರಿ ಚುನಾವಣಾ ಆಯೋಗಕ್ಕೆ ನೆರವುನೀಡಲು ವಿಫಲವಾದಲ್ಲಿ ಮಂಡಳಿಯ ಪ್ರತಿಯೊಬ್ಬ ಸದಸ್ಯ ಮತ್ತು ಮುಖ್ಯ ಕಾರ್ಯನಿರ್ವಾಹಕನು ಆರು ತಿಂಗಳುಗಳ ವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಹತ್ತು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡನೀಯನಾಗತಕ್ಕದ್ದು.

(21) ಯಾವೊಬ್ಬ ವ್ಯಕ್ತಿಯು, 39ಸಿ ಪ್ರಕರಣದಡಿಯಲ್ಲಿ ಮಂಡಳಿಯ ಸದಸ್ಯರ ಅಥವಾ ಪದಾಧಿಕಾರಿಗಳ ಚುನಾವಣೆಗೆ ಮೊದಲು, ಚುನಾವಣೆಯ ಸಮಯದಲ್ಲಿ ಅಥವಾ ಚುನಾವಣೆಯ ತರುವಾಯ ಯಾವುದೇ ಭ್ರಷ್ಟಾಚಾರವನ್ನು ಒಪ್ಪಿಕೊಂಡಲ್ಲಿ ಅಥವಾ 39ಕೆ ಪ್ರಕರಣದ ಅಡಿಯಲ್ಲಿನ ಯಾವುದೇ ಚುನಾವಣೆ ಅಪರಾಧಗಳನ್ನು ಎಸಗಿದಲ್ಲಿ ಆರು ತಿಂಗಳುಗಳವರೆಗೆ ವಿಸ್ತರಿಸಬಹುದಾದ ಅವಧಿಯ ಕಾರಾವಾಸದಿಂದ ಅಥವಾ ಹತ್ತು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದಂಥ ಜುಲ್ಮಾನೆಯಿಂದ ಅಥವಾ ಅವೆರಡರಿಂದಲೂ ದಂಡನೀಯ ನಾಗತಕ್ಕದ್ದು."

**49. 113ನೇ ಪ್ರಕರಣದ ತಿದ್ದುಪಡಿ,–** ಮೂಲ ಅಧಿನಿಯಮದ 113ನೇ ಪ್ರಕರಣದ (2)ನೇ ಉಪಪ್ರಕರಣದ ಪರಂತುಕದಲ್ಲಿ "ರಿಜಿಸ್ಟ್ರಾರನ ಪೂರ್ವ ಅನುಮತಿ ಪಡೆದು" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

**50. 117ನೇ ಪ್ರಕಣದ ತಿದ್ದುಪಡಿ,–** ಮೂಲ ಅಧಿನಿಯಮದ 117 ಪ್ರಕರಣದಲ್ಲಿನ (2)ನೇ ಉಪಪ್ರಕರಣವನ್ನು ಬಿಟ್ಟುಬಿಡತಕ್ಕದ್ದು.

**51. 118ನೇ ಪ್ರಕರಣದ ತಿದ್ದುಪಡಿ,–** ಮೂಲ ಅಧಿನಿಯಮದ 118ನೇ ಪ್ರಕರಣದಲ್ಲಿನ (1)ನೇ ಉಪಪ್ರಕರಣದಲ್ಲಿ (ಬಿ) ಮತ್ತು (ಸಿ) ಖಂಡಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಬಿ) ಸದಸ್ಯವನ್ನು ತೆಗೆದುಹಾಕುವುದು ಅಥವಾ ನಿರ್ದೇಶಕರನ್ನು ತೆಗೆದುಹಾಕುವುದು ಮತ್ತು ಅನರ್ಹಗೊಳಿಸುವುದು ಅಥವಾ ಮಂಡಳಿಯನ್ನು ತೆಗೆದುಹಾಕುವುದು;

(ಸಿ) 69ನೇ ಪ್ರಕರಣದಡಿಯಲ್ಲಿ ಅಗತ್ಯಪಡಿಸಿದ ಯಾವುದೇ ಸರ್‌ಚಾರ್ಜನ್ನು ಅನ್ವಯಿಸುವುದು ಅಥವಾ 70ನೇ ಪ್ರಕರಣದಡಿಯಲ್ಲಿ ಅಗತ್ಯಪಡಿಸಿದ ಯಾವುದೇ ವಿವಾದವನ್ನು ರಿಜಿಸ್ಟ್ರಾರರಿಗೆ ಉಲ್ಲೇಖಿಸುವುದು ಅಥವಾ 100ನೇ ಪ್ರಕರಣದಡಿಯಲ್ಲಿ ಹಣವನ್ನು ವಸೂಲಿ ಮಾಡುವುದು ಅಥವಾ 101ನೇ ಪ್ರಕರಣದಡಿಯಲ್ಲಿ ಕಾರ್ಯನಿರ್ವಹಣೆಗಾಗಿ ರಿಜಿಸ್ಟ್ರಾರರಿಗೆ ಉಲ್ಲೇಖಿಸಿದ ಯಾವುದೇ ಐತೀರ್ಪು ಅಥವಾ ಆದೇಶವನ್ನು ಕಾರ್ಯರೂಪಕ್ಕೆ ತರುವುದು",

**52. 124ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 124ನೇ ಪ್ರಕರಣದಲ್ಲಿನ ಪರಂತುಕದಲ್ಲಿನ "ಅಂಚೆ ಪ್ರಮಾಣ ಪತ್ರದ ಮೂಲಕ ನೀಡತಕ್ಕದ್ದು" ಎಂಬ ಪದಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"ಸಂಘವು ತನ್ನ ನೋಂದಾಯಿತ ಕಛೇರಿಗಳ ಮತ್ತು ಇದರ ಶಾಖೆಗಳ ಸೂಚನಾ ಫಲಕಗಳ ಮೇಲೆ ಪ್ರಕಟಿಸತಕ್ಕದ್ದು; ಮತ್ತು

(ಎ) ಸೌಲಭ್ಯಗಳು ಲಭ್ಯವಾಗುವ ಎಲ್ಲಾ ಸ್ಥಳಗಳಲ್ಲಿ ಒಟ್ಟಾಗಿ ಅಂಚೆ ಮೂಲಕ ಕಳುಹಿಸುವುದು; ಅಥವಾ

(ಬಿ) ಇ–ಮೇಲ್ ಅಥವಾ ಎಸ್.ಎಂ.ಎಸ್ ಮೂಲಕ ಕಳುಹಿಸುವುದು; ಅಥವಾ

(ಸಿ) ಸಾಮಾನ್ಯ ಅಂಚೆ ಮೂಲಕ ಕಳುಹಿಸುವುದು ಮತ್ತು

(i) ಯಾರ ಸಹಕಾರ ಸಂಘಗಳ ಕಾರ್ಯನಿರ್ವಹಣೆಯು ಜಿಲ್ಲೆಗಿಂತ ಕಡಿಮೆ ವ್ಯಾಪ್ತಿ ಪ್ರದೇಶದಲ್ಲಿ ಇದೆಯೋ ಅಂಥ ಸ್ಥಳಗಳಲ್ಲಿ ವ್ಯಾಪಕ ಪ್ರಸಾರವನ್ನು ಹೊಂದಿರುವ ಒಂದು ಕನ್ನಡ ವಾರ್ತಾಪತ್ರಿಕೆಯಲ್ಲಿ ಅಥವಾ

(ii) ಯಾರ ಸಹಕಾರ ಸಂಘಗಳ ಕಾರ್ಯನಿರ್ವಹಣೆಯು, ಜಿಲ್ಲೆಗೆ ವಿಸ್ತರಿಸಿದ ಮತ್ತು ಮೀರಿದ ಮತ್ತು ಇಡೀ ರಾಜ್ಯಕ್ಕೆ ವಿಸ್ತರಿಸಿದಂಥ ವ್ಯಾಪ್ತಿ ಪ್ರದೇಶದಲ್ಲಿ ಇದೆಯೋ ಅಂಥ ಸ್ಥಳಗಳಲ್ಲಿ ವ್ಯಾಪಕ ಪ್ರಸಾರವನ್ನು ಹೊಂದಿರುವ ಒಂದು ಕನ್ನಡ ಮತ್ತು ಒಂದು ಇಂಗ್ಲಿಷ್ ವಾರ್ತಾ ಪತ್ರಿಕೆಗಳಲ್ಲಿ ಪ್ರಕಟಿಸುವುದು."

**53. 129ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 129ನೇ ಪ್ರಕರಣದಲ್ಲಿನ (2)ನೇ ಉಪ ಪ್ರಕರಣದಲ್ಲಿ,

(i) (ಇ) ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಇ–1)– ಸಂಘದೊಂದಿಗಿನ ವ್ಯವಹಾರಗಳ ತಮ್ಮ ವ್ಯವಹರಣೆಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಪಡೆಯುವುದಕ್ಕೆ ಸದಸ್ಯರ ಹಕ್ಕು."

(ii) (ಜಿ) ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಜಿ) ಸಹಕಾರಿ ಚುನಾವಣಾ ಆಯುಕ್ತರ ಸೇವಾ ಷರತ್ತುಗಳು";

(iii) (1)ನೇ ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಎಲ್) ಪ್ರತಿನಿಧಿ ಮಹಾಸಭೆಗಳು ಮತ್ತು ಮಂಡಳಿ ಸಭೆಗಳು ಹಾಗೂ ಮಹಾಸಭೆಗಳು ಮತ್ತು ಮಂಡಳಿ ಸಭೆಗಳ ಕಡ್ಡಾಯ ಕೋರಿಕೆಗಳ ಒಳಗೊಂಡಂತೆ ಈ ಮಹಾಸಭೆಗಳನ್ನು ನಡೆಸುವ ಕಾರ್ಯ ವಿಧಾನ";

(iv) (ಎಲ್) ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಎಲ್–1) ಯಾರೇ ನಿರ್ದೇಶಕನ ವಿರುದ್ಧ ಅವಿಶ್ವಾಸವನ್ನು ಪರಿಗಣಿಸುವುದಕ್ಕೆ ಸಂಬಂಧಿಸಿದ ಕಾರ್ಯವಿಧಾನ".

(v) (ಎಂ) ಖಂಡದಲ್ಲಿನ "ಸಮಿತಿಯ ಸದಸ್ಯನು ಮತ್ತು" ಎಂಬ ಪದಗಳನ್ನು ಬಿಟ್ಟುಬಿಡತಕ್ಕದ್ದು.

(vi) (ಒ) ಖಂಡದಲ್ಲಿನ "ವಿದ್ಯಾರ್ಹತೆ" ಎಂಬ ಪದಗಳಿಗೆ "ವಿದ್ಯಾರ್ಹತೆ, ಅನುಭವ ಮತ್ತು ಕಾರ್ಯವಿಧಾನ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(vii) (ಟಿ) ಖಂಡದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಟಿ–1) ಕರ್ನಾಟಕ ರಾಜ್ಯ ಸಹಕಾರಿ ಒಕ್ಕೂಟವು ಶಿಕ್ಷಣ ನಿಧಿಯ ನಿರ್ವಹಣೆ ಮತ್ತು ನಿಯಂತ್ರಿಸುವ ಸಂಬಂಧಿಸಿದ ಕಾರ್ಯವಿಧಾನ".

(ಟಿ–2) ಚುನಾವಣಾ ಆಯೋಗವು ಮತದಾರರ ಪಟ್ಟಿಯನ್ನು ಸಿದ್ಧಪಡಿಸುವುದಕ್ಕೆ ಮತ್ತು ಚುನಾವಣೆಗಳನ್ನು ನಡೆಸುವುದಕ್ಕೆ ತಗಲುವ ವೆಚ್ಚ".

(viii) (ವೈ)ಖಂಡದಲ್ಲಿನ "ಸಹಕಾರ ಸಂಘಗಳ" ಎಂಬ ಪದಗಳ ತರುವಾಯ "ಲೆಕ್ಕಪರಿಶೋಧಕನಿಗೆ ಮತ್ತು ಲೆಕ್ಕಪರಿಶೋಧನಾ ಫರ್ಮಿಗೆ ಸಂದಾಯ ಮಾಡಬೇಕಾದ ಪರಿಶ್ರಮಧನದ" ಎಂಬ ಪದಗಳು ಮತ್ತು ಸೆಮಿಕೋಲನ್ ಅನ್ನು ಸೇರಿಸತಕ್ಕದ್ದು.

(ix) (ii) ನೇ ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು:–

ಸಹಕಾರ ಸಂಘಗಳಿಗೆ ಕಳುಹಿಸಬೇಕಾದ ಲೆಕ್ಕಪರಿಶೋದಕರ ಮತ್ತು ಲೆಕ್ಕಪರಿಶೋಧನಾ ಫರ್ಮ್‌ಗಳ ಹೆಸರುಗಳನ್ನು ಪಟ್ಟಿ ಮಾಡುವ ಕಾರ್ಯವಿಧಾನ".

**54. ತೊಂದರೆಗಳನ್ನು ನಿವಾರಿಸಲು ಅಧಿಕಾರ.– (1)** ಈ ಅಧಿನಿಯಮದ ಮೂಲಕ ಮಾಡಲಾದ ತಿದ್ದುಪಡಿಗಳನ್ನು ಜಾರಿಗೊಳಿಸುವಲ್ಲಿ, ಯಾವುದೇ ತೊಂದರೆ ಉದ್ಭವಿಸಿದರೆ, ರಾಜ್ಯ ಸರ್ಕಾರವು, ಸರ್ಕಾರೀ ರಾಜ್ಯಪತ್ರದಲ್ಲಿ ಆದೇಶವನ್ನು ಹೊರಡಿಸುವ ಮೂಲಕ, ಆ ತೊಂದರೆಗಳನ್ನು ನಿವಾರಿಸುವುದಕ್ಕಾಗಿ

ಅದಕ್ಕೆ ಅವಶ್ಯಕ ಅಥವಾ ವಿಹಿತವೆಂದು ಕಂಡುಬರಬಹುದಾದಂತೆ, ಮೂಲ ಅಧಿನಿಯಮ ಮತ್ತು ಸಂವಿಧಾನ (ತೊಂಬತ್ತೇಳನೇ ತಿದ್ದುಪಡಿ) ಅಧಿನಿಯಮ, 2011ರ ಉಪಬಂಧಗಳಿಗೆ ಅಸಂಗತವಲ್ಲದ ಉಪಬಂಧಗಳನ್ನು ಮಾಡಬಹುದು:

ಪರಂತು, ಅಂಥ ಯಾವುದೇ ಆದೇಶವನ್ನು ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಿಂದ ಎರಡು ವರ್ಷಗಳ ಅವಧಿಯು ಮುಕ್ತಾಯವಾದ ತರುವಾಯ ಮಾಡತಕ್ಕದ್ದಲ್ಲ.

(2) ಈ ಪ್ರಕರಣದ ಅಡಿಯಲ್ಲಿ ಮಾಡಿದ ಪ್ರತಿಯೊಂದು ಆದೇಶವನ್ನು, ಅದನ್ನು ಮಾಡಿದ ತರುವಾಯ, ಆದಷ್ಟು ಬೇಗನೆ, ರಾಜ್ಯ ವಿಧಾನ ಮಂಡಲದ ಮುಂದೆ ಮಂಡಿಸತಕ್ಕದ್ದು.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಸಂವಿಧಾನ (97ನೇ ತಿದ್ದುಪಡಿ) ಅಧಿನಿಯಮ, 2011ರ ಉಪಬಂಧಗಳಿಗೆ ಅನುಸಾರವಾಗಿ ಕರ್ನಾಟಕ ಸಹಕಾರಿ ಸಂಘಗಳ ಅಧಿನಿಯಮ, 1959 ನ್ನು (1959ರ ಕರ್ನಾಟಕ ಅಧಿನಿಯಮ 11) ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ. ಇತರ ಪ್ರಾಸಂಗಿಕ ತಿದ್ದುಪಡಿಗಳನ್ನು ಮಾಡುವ ಅವಕಾಶವನ್ನು ತೆಗೆದುಕೊಳ್ಳಲಾಗಿದೆ.

ಆದ್ದರಿಂದ ಈ ವಿಧೇಯಕ.

## ಆರ್ಥಿಕ ಜ್ಞಾಪನಾ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮದಿಂದಾಗಿ ಅಂದಾಜು 708.28 ಲಕ್ಷ ರೂಪಾಯಿಗಳ ಅವರ್ತಕ ವೆಚ್ಚ ಮತ್ತು 291.72 ಲಕ್ಷ ರೂಪಾಯಿಗಳ ಅನಾವರ್ತಕ ವೆಚ್ಚ ಉಂಟಾಗುತ್ತದೆ.

## ಪ್ರತ್ಯಾಯೋಜಿತ ಶಾಸನ ರಚನಾಧಿಕಾರ ಕುರಿತ ಜ್ಞಾಪನಪತ್ರ

| | | |
|---|---|---|
| ಖಂಡ 29: | (i) | (5)ನೇ ಉಪ-ಖಂಡವು, ಸಹಕಾರಿ ಚುನಾವಣಾ ಆಯುಕ್ತ ಮತ್ತು ಕಾರ್ಯದರ್ಶಿಯ ಸೇವಾ ಷರತ್ತುಗಳ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| | (ii) | (12)ನೇ ಉಪ-ಖಂಡವು, ಸಹಕಾರಿ ಚುನಾವಣಾ ಆಯೋಗದ ಅಧಿಕಾರಿಗಳು ಮತ್ತು ಸಿಬ್ಬಂದಿಯ ಸೇವಾ ಷರತ್ತುಗಳ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| | (iii) | (13)ನೇ ಉಪ-ಖಂಡವು, ಚುನಾವಣೆಯನ್ನು ನಡೆಸುವುದಕ್ಕಾಗಿ ಕಾರ್ಯವಿಧಾನ ಮತ್ತು ಮಾರ್ಗದರ್ಶಿಗಳ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| | (iv) | (14)ನೇ ಉಪ-ಖಂಡವು, ಮತದಾರರ ಪಟ್ಟಿಯ ತಯಾರಿಕೆ ಮತ್ತು ಚುನಾವಣೆಗಳನ್ನು ನಡೆಸುವ ವೆಚ್ಚವನ್ನು ಭರಿಸುವ ವಿಧಾನದ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| ಖಂಡ 32: | (i) | (4)ನೇ ಉಪ-ಖಂಡವು, ಕರ್ನಾಟಕ ರಾಜ್ಯ ಸಹಕಾರಿ ಒಕ್ಕೂಟ ನಿಯಮಿತವು ಸಹಕಾರಿ ಶಿಕ್ಷಣ ನಿಧಿಯನ್ನು ನಿರ್ವಹಿಸುವ ಮತ್ತು ನಿಯಂತ್ರಿಸುವ ವಿಧಾನದ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| | (ii) | (5)ನೇ ಉಪ-ಖಂಡವು, ಸಲಹಾ ಸಮಿತಿಯನ್ನು ರಚಿಸುವ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| ಖಂಡ 35: | (i) | (3)ನೇ ಉಪ-ಖಂಡವು, ಲೆಕ್ಕಪರಿಶೋಧಕರ ಮತ್ತು ಲೆಕ್ಕಪರಿಶೋಧನ ಫರ್ಮ್‌ನ ಪಟ್ಟಿಯನ್ನು ತಯಾರಿಸುವ ವಿಧಾನದ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| | (ii) | (7)ನೇ ಉಪ-ಖಂಡವು, ಪ್ರತಿಯೊಂದು ಸಹಕಾರಿ ಸಂಘದ ಮಂಡಲಿಯು ವಾರ್ಷಿಕ ಆರ್ಥಿಕ ತಃಖ್ತೆಯನ್ನು ತಯಾರಿಸುವ ಮತ್ತು ಸಲ್ಲಿಸುವ ವಿಧಾನದ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| | (iii) | (11)ನೇ ಉಪ-ಖಂಡವು, ವಿಧಾನಮಂಡಲದ ಮುಂದೆ ಸಹಕಾರಿ ಸಂಘಗಳ ಲೆಕ್ಕಪರಿಶೋಧನಾ ವರದಿಗಳನ್ನು ಮಂಡಿಸುವ ವಿಧಾನದ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| | (iv) | (17)ನೇ ಉಪ-ಖಂಡದ (ಡಿ) ಬಾಬು, ಲೆಕ್ಕಪರಿಶೋಧನಾ ವರದಿಯು ಒಳಗೊಳ್ಳತಕ್ಕ ಅಂಶಗಳನ್ನು ನಿಯಮಿಸುವ ಬಗ್ಗೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |

ಪ್ರಸ್ತಾವಿತ ಶಾಸನಾತ್ಮಕ ಅಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಜಗದೀಶ ಶೆಟ್ಟರ**
ಮುಖ್ಯಮಂತ್ರಿಗಳು

**ಪಿ. ಓಂಪ್ರಕಾಶ**
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ

## ಅನುಬಂಧ

## ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಸಂಖ್ಯೆ 11)
## ಉದ್ಧೃತ ಭಾಗ

**XX** **XX** **XX**

ಕರ್ನಾಟಕ ರಾಜ್ಯದಲ್ಲಿ ಸಹಕಾರ ಸಂಘಗಳಿಗೆ ಸಂಬಂಧಿಸಿದ ಕಾನೂನುಗಳನ್ನು ಕ್ರೋಡೀಕರಿಸುವ ಮತ್ತು ತಿದ್ದುಪಡಿ ಮಾಡುವ ಅಧಿನಿಯಮ.

ಕರ್ನಾಟಕ ರಾಜ್ಯದಲ್ಲಿ ಸಹಕಾರ ಸಂಘಗಳಿಗೆ ಸಂಬಂಧಿಸಿದ ಕಾನೂನುಗಳನ್ನು ಕ್ರೋಡೀಕರಿಸುವುದು ಮತ್ತು ತಿದ್ದುಪಡಿ ಮಾಡುವುದು ವಿಹಿತವಾಗಿರುವುದರಿಂದ;

ಭಾರತ ಗಣರಾಜ್ಯದ ಹತ್ತನೆಯ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದು:-

**XX** **XX** **XX**

**2. ಪರಿಭಾಷೆಗಳು.**- ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(ಎ) 'ಅಪೆಕ್ಸ್ ಸಂಘ ' ಎಂದರೆ ಇಡೀ ರಾಜ್ಯದಾದ್ಯಂತ ತನ್ನ ಕಾರ್ಯಾಚರಣೆಯನ್ನು ವಿಸ್ತರಿಸಿರುವ ಪೆಡರಲ್ ಸಂಘ;

(ಎ1) 'ಸಹಾಯ ಪಡೆದ ಸಂಘ ' ಎಂದರೆ ಸಾಲದ ಅಥವಾ ಬಡ್ಡಿಯ ಮರುಪಾವತಿಗಾಗಿ ಸರ್ಕಾರದಿಂದ ಷೇರು ಬಂಡವಾಳದ ಅಥವಾ ಸಾಲದ ಅಥವಾ ಅನುದಾನದ ಅಥವಾ ಖಾತರಿಯ ರೂಪದಲ್ಲಿ ಸರ್ಕಾರದ ನೆರವನ್ನು ಪಡೆದುಕೊಂಡಿರುವ ಸಹಕಾರ ಸಂಘ;"

(ಎ2) "ಉಪವಿಧಿಗಳು" ಎಂದರೆ ಈ ಅಧಿನಿಯಮದ ಮೇರೆಗೆ ನೋಂದಾಯಿತವಾಗಿರುವ ಅಥವಾ ನೋಂದಾಯಿತವಾಗಿದೆಯೆಂದು ಭಾವಿಸಲಾಗುವ ಮತ್ತು ತತ್ಕಾಲದಲ್ಲಿ ಜಾರಿಯಲ್ಲಿರುವ ಉಪವಿಧಿಗಳು; ಮತ್ತು ಉಪವಿಧಿಗಳ ನೋಂದಾಯಿತ ತಿದ್ದುಪಡಿಯು ಇದರಲ್ಲಿ ಒಳಗೊಳ್ಳುತ್ತದೆ;

(ಎ3) 'ಮುಖ್ಯ ಕಾರ್ಯನಿರ್ವಾಹಕ' ಎಂದರೆ ಯಾವುದೇ ಪದನಾಮದಿಂದ ಕರೆಯಲಾಗುವ ಸಹಕಾರ ಸಂಘದ ಯಾರೇ ನೌಕರ ಮತ್ತು ಇದು, ಈ ಅಧಿನಿಯಮ, ನಿಯಮಗಳ ಅಥವಾ ಉಪ ವಿಧಿಗಳ ಮೇರೆಗೆ ಮುಖ್ಯ ಕಾರ್ಯನಿರ್ವಾಹಕನ ಪ್ರಕಾರ್ಯಗಳನ್ನು ನಿರ್ವಹಿಸುವ ರಾಜ್ಯ ಸರ್ಕಾರದ ನೌಕರ, ಯಾವುದೇ ಇತರ ಸಂಸ್ಥೆಯ ಅಥವಾ ಸಹಕಾರ ಸಂಘದ ನೌಕರನನ್ನು ಒಳಗೊಳ್ಳುತ್ತದೆ;

ಎ4) 'ನಿರ್ದೇಶಕರು ಸಹಕಾರಿ ಲೆಕ್ಕ ಪರಿಶೋಧನೆ' ಎಂದರೆ ಈ ಅಧಿನಿಯಮದ ಮೇರೆಗೆ ಸಹಕಾರ ಲೆಕ್ಕ ಪರಿಶೋಧನಾ ನಿರ್ದೇಶಕರ ಪ್ರಕಾರ್ಯಗಳನ್ನು ನಿರ್ವಹಿಸಲು ನೇಮಕಗೊಂಡ ಒಬ್ಬ ವ್ಯಕ್ತಿ ಮತ್ತು ಇದು ಸಹಕಾರ ಲೆಕ್ಕ ಪರಿಶೋಧನಾ ನಿರ್ದೇಶಕರು ತಮ್ಮ ಎಲ್ಲಾ ಅಥವಾ ಯಾವುದೇ ಅಧಿಕಾರಗಳನ್ನು ಚಲಾಯಿಸುವಲ್ಲಿ ಸಹಕಾರ ಲೆಕ್ಕ ಪರಿಶೋಧನಾ ನಿರ್ದೇಶಕರಿಗೆ ನೆರವು ನೀಡಲು ನೇಮಕಗೊಂಡ ಸಹಕಾರ ಲೆಕ್ಕ ಪರಿಶೋಧನಾ ಅಡಿಷನಲ್ ನಿರ್ದೇಶಕರು, ಸಹಕಾರ ಲೆಕ್ಕ ಪರಿಶೋಧನಾ ಜಂಟಿ ನಿರ್ದೇಶಕ, ಸಹಕಾರ ಲೆಕ್ಕ ಪರಿಶೋಧನಾ ಉಪ ನಿರ್ದೇಶಕ ಮತ್ತು ಸಹಕಾರ ಲೆಕ್ಕ ಪರಿಶೋಧನಾ ಸಹಾಯಕ ನಿರ್ದೇಶಕರನ್ನು ಒಳಗೊಳ್ಳುತ್ತದೆ;

(ಬಿ) "ಸಮಿತಿ" ಎಂದರೆ ಸಂಘದ ವ್ಯವಹಾರಗಳ ಕಾರ್ಯನಿರ್ವಹಣೆಯನ್ನು ವಹಿಸಿಕೊಟ್ಟ ಯಾವುದೇ ಹೆಸರಿನಿಂದ ಕರೆಯಲಾಗುವ ಸಹಕಾರ ಸಂಘದ ಆಡಳಿತ ಮಂಡಲಿ;

ಬಿ-1) 'ಸಹಕಾರ ಬ್ಯಾಂಕ್' ಎಂದರೆ ಬ್ಯಾಂಕಿಂಗ್ ವ್ಯವಹಾರವನ್ನು ಮಾಡುತ್ತಿರುವ ಸಹಕಾರಿ ಸಂಘ;

**ವಿವರಣೆ.**- ಈ ಖಂಡದ ಉದ್ದೇಶಕ್ಕಾಗಿ, "ಬ್ಯಾಂಕಿಂಗ್" ಎಂಬುದು ಬ್ಯಾಂಕಿಂಗ್ ವಿನಿಯಮನ ಅಧಿನಿಯಮ, 1949 (ಕೇಂದ್ರ ಅಧಿನಿಯಮ 1949ರ 10)ರ 5ನೇ ಪ್ರಕರಣದಲ್ಲಿ ಅದಕ್ಕೆ ನೀಡಿರುವ ಅರ್ಥವನ್ನೇ ಹೊಂದಿರತಕ್ಕದ್ದು;

1. 1998ರ ಕರ್ನಾಟಕ ಅಧಿನಿಯಮ ಸಂಖ್ಯೆ 25ರ ಮೂಲಕ 15-8-98 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಸಿ) 'ಸಹಕಾರ ಸಂಘ' ಎಂದರೆ ಈ ಅಧಿನಿಯಮದ ಮೇರೆಗೆ ನೋಂದಾಯಿತವಾಗಿರುವ ಅಥವಾ ನೋಂದಾಯಿತವಾಗಿದೆಯೆಂದು ಭಾವಿಸಲ್ಪಡುವ ಸಂಘ;

(ಡಿ) 'ನಿಯಮಿತ ಹೊಣೆಯ ಸಹಕಾರ ಸಂಘ' ಎಂದರೆ ಯಾವ ಸಂಘದ ಸಮಾಪನದ ಸಂದರ್ಭದಲ್ಲಿ ಸಂಘದ ಋಣದ ಬಗ್ಗೆ ಸದಸ್ಯರ ಹೊಣೆಯು ಅದರ ಉಪವಿಧಿಗಳಿಂದ-

(i) ಅವರು ಹೊಂದಿದ್ದ ಷೇರುಗಳ ಮೇಲೆ ಸಂದಾಯವಾಗದ ಯಾವುದೇ ಮೊಬಲಗು ಇದ್ದಲ್ಲಿ, ಅಷ್ಟಕ್ಕೆ; ಅಥವಾ

(ii) ಸಂಘದ ಆಸ್ತಿಗೆ ವಂತಿಗೆ ನೀಡಲು ಅವರು ಒಪ್ಪಿಕೊಂಡಿರುವ ಮೊಬಲಗಿನ ಮಟ್ಟಿಗೆ

- ಸೀಮಿತವಾಗಿರುವುದೋ ಆ ಸಹಕಾರಿ ಸಂಘ;

ಡಿ1) 'ಸಹಕಾರಿ ವರ್ಷ ಅಥವಾ ವರ್ಷ' ಎಂದರೆ ಏಪ್ರಿಲ್ ಮೊದಲ ದಿನದಿಂದ ಆರಂಭವಾಗುವ ವರ್ಷ. (ಡಿ-2) "ಸಹಕಾರಿ" ಎಂದರೆ ಕರ್ನಾಟಕ ಸೌಹಾರ್ದ ಸಹಕಾರಿ ಅಧಿನಿಯಮ, 1997ರ (2000ದ ಕರ್ನಾಟಕ ಅಧಿನಿಯಮ 17) ಅಡಿಯಲ್ಲಿ ನೋಂದಾಯಿತವಾದ ಒಂದು ಸಹಕಾರಿ ಮತ್ತು ಇದು ಸಂಯುಕ್ತ ಸಹಕಾರಿ ಹಾಗೂ ಒಕ್ಕೂಟ ಸಹಕಾರಿ ಇವುಗಳನ್ನು ಒಳಗೊಳ್ಳುತ್ತದೆ.

(ಇ) 'ನಿಯಮಿತವಲ್ಲದ ಹೊಣೆಯ ಸಹಕಾರ ಸಂಘ' ಎಂದರೆ ಯಾವ ಸಂಘದ ಸಮಾಪನದ ಸಂದರ್ಭದಲ್ಲಿ ಅದರ ಎಲ್ಲ ಬಾಧ್ಯತೆಗಳ ಸಲುವಾಗಿ ಮತ್ತು ಸಂಬಂಧವಾಗಿ ಹಾಗೂ ಸಂಘದ ಆಸ್ತಿಯಲ್ಲಿದ್ದ ಯಾವುದಾದರೂ ಕೊರತೆಗಾಗಿ ಹಣ ನೀಡಲು ಅದರ ಸದಸ್ಯರು ಒಟ್ಟಾಗಿ ಮತ್ತು ಬಿಡಿಯಾಗಿ ಹೊಣೆಗಾರರಾಗಿರುವರೋ ಆ ಸಹಕಾರ ಸಂಘ;

(ಇ-1) "ಸಾಲ ನೀಡುವ ಏಜೆನ್ಸಿ" ಎಂದರೆ ಕರ್ನಾಟಕ ಕೃಷಿ ಸಾಲ ನೀಡಿಕೆ ಕಾರ್ಯಾಚರಣೆಗಳು ಮತ್ತು ಸಂಕೀರ್ಣ ಉಪಬಂಧಗಳ ಅಧಿನಿಯಮ, 1974ರಲ್ಲಿ ಪರಿಭಾಷಿಸಲಾದ ಸಾಲನೀಡುವ ಏಜೆನ್ಸಿ; ಮತ್ತು ಇದರಲ್ಲಿ ಸಹಕಾರ ಸಂಘಕ್ಕೆ ಹಣಕಾಸು ನೆರವು ನೀಡುವ ಮತ್ತು ರಾಜ್ಯ ಸರ್ಕಾರವು ಕಾಲದಿಂದ ಕಾಲಕ್ಕೆ ಅಧಿಸೂಚಿಸುವ ಯಾವುದೇ ಇತರೆ ನಿಕಾಯ ಅಥವಾ ನಿಗಮ ಅಥವಾ ಹಣಕಾಸು ಸಂಸ್ಥೆ ಸೇರುತ್ತದೆ;

(ಇ-2) 'ಠೇವಣಿ ವಿಮಾ ನಿಗಮ' ಎಂದರೆ ಠೇವಣಿ ವಿಮಾ ನಿಗಮ ಅಧಿನಿಯಮ, 1961 (1961ರ ಕೇಂದ್ರ ಅಧಿನಿಯಮ 47)ರ 3ನೇ ಪ್ರಕರಣದ ಮೇರೆಗೆ ಸ್ಥಾಪಿತವಾದ ಠೇವಣಿ ವಿಮಾ ನಿಗಮ;

(ಇ-3) 'ನೌಕರ' ಎಂದರೆ ಸಹಕಾರ ಸಂಘದ ಸಂಬಳ ತೆಗೆದುಕೊಳ್ಳುವ ನೌಕರ ಮತ್ತು ಇದು, ಸರ್ಕಾರಿ ಸಂಘದಲ್ಲಿ ತಾತ್ಕಾಲಿಕವಾಗಿ ಕೆಲಸ ಮಾಡುತ್ತಿರುವ ರಾಜ್ಯ ಸರ್ಕಾರದ ಅಧಿಕಾರಿ ಅಥವಾ ಯಾವುದೇ ಇತರೆ ಸಂಸ್ಥೆಯ ಅಥವಾ ಸಹಕಾರ ಸಂಘದ ಯಾರೇ ನೌಕರನನ್ನು ಒಳಗೊಳ್ಳುತ್ತದೆ;

(ಇ-4) 'ಫೆಡರಲ್ ಸಂಘ' ಎಂದರೆ ಸದಸ್ಯತ್ವವು ವ್ಯಕ್ತಿಗಳಿಗೆ ಮುಕ್ತವಾಗಿರದ ಸಹಕಾರ ಸಂಘ:

ಪರಂತು, ಈ ಖಂಡದಲ್ಲಿರುವ ಯಾವುದೂ, ನಾಮಮಾತ್ರದ ಸದಸ್ಯರಾಗಿ ವ್ಯಕ್ತಿಗಳನ್ನು ಸೇರಿಸಿಕೊಳ್ಳುವುದಕ್ಕೆ ಅನ್ವಯವಾಗತಕ್ಕದ್ದಲ್ಲ;

(ಇ-5) "ಹಣಕಾಸು ನೀಡಿಕೆ ಬ್ಯಾಂಕ್" ಎಂದರೆ ಇತರ ಸಹಕಾರ ಸಂಘಗಳಿಗೆ ನಗದು ರೂಪದಲ್ಲಿ ಅಥವಾ ವಸ್ತು ರೂಪದಲ್ಲಿ ಮುಂಗಡ ನೀಡಿಕೆಯನ್ನು ತನ್ನ ಮುಖ್ಯ ಉದ್ದೇಶವಾಗಿ ಹೊಂದಿರುವ ಒಂದು ಸಹಕಾರ ಸಂಘ;

(ಎಫ್) "ಸದಸ್ಯ" ಎಂದರೆ ಸಹಕಾರ ಸಂಘದ ನೋಂದಣಿ ಕೋರಿ ಸಲ್ಲಿಸಿದ ಅರ್ಜಿಯಲ್ಲಿ ಸೇರಿದ ಮತ್ತು ಹಾಗೆ ನೋಂದಣಿಯಾದ ತರುವಾಯ ಈ ಅಧಿನಿಯಮ, ನಿಯಮಗಳು ಮತ್ತು ಉಪವಿಧಿಗಳಿಗೆ ಅನುಸಾರವಾಗಿ ಸದಸ್ಯತ್ವಕ್ಕೆ ಪ್ರವೇಶ ಪಡೆದ ವ್ಯಕ್ತಿ ಮತ್ತು ಅದರಲ್ಲಿ ನಾಮಮಾತ್ರದ ಹಾಗೂ ಸಹ ಸದಸ್ಯ ಇವರು ಸೇರಿರುತ್ತಾರೆ;

(ಜಿ) 'ಪದಾಧಿಕಾರಿ' ಎಂದರೆ ಅಧ್ಯಕ್ಷ, ಉಪಾಧ್ಯಕ್ಷ, ಸಭಾಧ್ಯಕ್ಷ, ಉಪ ಸಭಾಧ್ಯಕ್ಷ, ಸಮಾಪಕ, ಆಡಳಿತಾಧಿಕಾರಿ, ವಿಶೇಷ ಅಧಿಕಾರಿ ಮತ್ತು ಇದು ಸಮಿತಿಯ ಸದಸ್ಯನನ್ನು ಅಥವಾ ಸಹಕಾರ ಸಂಘದ ವ್ಯವಹಾರಕ್ಕೆ ಸಂಬಂಧಪಟ್ಟ ಯಾವುದೇ ಅಧಿಕಾರವನ್ನು ಚಲಾಯಿಸಲು ಅಥವಾ ಯಾವುದೇ ಪ್ರಕಾರ್ಯವನ್ನು ನಿರ್ವಹಿಸಲು ಮತ್ತು ಸಂಘದ ವ್ಯವಹಾರಕ್ಕೆ ಸಂಬಂಧಪಡುವ ಕಾರ್ಯನೀತಿಗಳ ಬಗ್ಗೆ ನಿರ್ದೇಶನ ನೀಡಲು ಅಧಿಕಾರ ಹೊಂದಿರುವ ನೌಕರನಲ್ಲದ ಯಾರೇ ಇತರೆ ವ್ಯಕ್ತಿಯನ್ನು ಒಳಗೊಳ್ಳುತ್ತದೆ.

(ಹೆಚ್) "ನಿಯಮಿಸಲಾದುದು" ಎಂದರೆ ಈ ಅಧಿನಿಯಮದ ಮೇರೆಗೆ ರಚಿಸಲಾದ ನಿಯಮಗಳ ಮೂಲಕ ನಿಯಮಿಸಲಾದುದು;

(ಹೆಚ್-1) 'ಪ್ರಾಥಮಿಕ ಸಂಘ' ಎಂದರೆ ಬೇರೊಂದು ಸಹಕಾರ ಸಂಘಕ್ಕೆ ಸದಸ್ಯತ್ವದ ಅವಕಾಶವಿಲ್ಲದ ಸಹಕಾರ ಸಂಘ "

(ಐ) 'ರಿಜಿಸ್ಟ್ರಾರ್' ಎಂದರೆ ಈ ಅಧಿನಿಯಮದ ಮೇರೆಗೆ ಸಹಕಾರ ಸಂಘಗಳ ರಿಜಿಸ್ಟ್ರಾರನ ಪ್ರಕಾರ್ಯಗಳನ್ನು ನೆರವೇರಿಸಲು ನಿಯುಕ್ತನಾದ ವ್ಯಕ್ತಿ; ಮತ್ತು ಅದರಲ್ಲಿ ರಿಜಿಸ್ಟ್ರಾರನ ಎಲ್ಲ ಅಧಿಕಾರಗಳನ್ನು ಅಥವಾ ಅವುಗಳಲ್ಲಿ ಯಾವೊಂದನ್ನು ಚಲಾಯಿಸುವಾಗ ಅವನಿಗೆ ನೆರವು ನೀಡಲು ನಿಯುಕ್ತನಾದ ಸಹಕಾರ ಸಂಘಗಳ ಅಧಿಕ ರಿಜಿಸ್ಟ್ರಾರ್, ಸಹಕಾರ ಸಂಘಗಳ ಜಂಟಿ ರಿಜಿಸ್ಟ್ರಾರ್, ಸಹಕಾರ ಸಂಘಗಳ ಉಪ ರಿಜಿಸ್ಟ್ರಾರ್ ಮತ್ತು ಸಹಕಾರ ಸಂಘಗಳ ಸಹಾಯಕ ರಿಜಿಸ್ಟ್ರಾರ್ ಇವರು ಸೇರುತ್ತಾರೆ;

(ಐ-1) 'ರಿಸರ್ವ್ ಬ್ಯಾಂಕ್' ಎಂದರೆ ಭಾರತೀಯ ರಿಸರ್ವ್‌ಬ್ಯಾಂಕ್ ಅಧಿನಿಯಮ, 1934ರ (1934ರ ಕೇಂದ್ರಾಧಿನಿಯಮ 2) ಮೇರೆಗೆ ರಚಿತವಾದ ಭಾರತೀಯ ರಿಸರ್ವ್ ಬ್ಯಾಂಕ್;

(ಜೆ) 'ನಿಯಮಗಳು' ಎಂದರೆ ಈ ಅಧಿನಿಯಮದ ಮೇರೆಗೆ ರಚಿಸಲಾದ ನಿಯಮಗಳು;

(ಜೆ-1) 'ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡ' ಎಂದರೆ ತತ್ಕಾಲದಲ್ಲಿ ಜಾರಿಯಲ್ಲಿರುವ ಸಂವಿಧಾನ (ಅನುಸೂಚಿತ ಜಾತಿಗಳು) ಆದೇಶ, 1950 ಮತ್ತು (ಅನುಸೂಚಿತ ಪಂಗಡಗಳು) ಆದೇಶ, 1950ರಲ್ಲಿ ಕರ್ನಾಟಕ ರಾಜ್ಯದ ಸಂಬಂಧವಾಗಿ ನಿರ್ದಿಷ್ಟಪಡಿಸಿರುವ ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡಗಳು;

(ಜೆ-2) 'ದ್ವಿತೀಯ ಸಂಸ್ಥೆ ' ಎಂದರೆ ಬೇರೊಂದು ಸಹಕಾರ ಸಂಘಕ್ಕೆ ಸದಸ್ಯತ್ವದ ಅವಕಾಶವಿರುವ ಸಹಕಾರ ಸಂಘ;

(ಜೆ-3) 'ರಾಜ್ಯ ಪ್ರತಿನಿಧಿ' ಎನದರೆ 2ಎ ಪ್ರಕರಣದ ಮೇರೆಗೆ ರಾಜ್ಯ ಪ್ರತಿನಿಧಿಯಾಗಿ ನೇಮಕಗೊಂಡ ಯಾರೇ ವ್ಯಕ್ತಿ;

(ಕೆ) 'ನ್ಯಾಯಾಧಿಕರಣ' ಎಂದರೆ ಕರ್ನಾಟಕ ಅಪೀಲು ನ್ಯಾಯಾಧೀಕರಣ ಅಧಿನಿಯಮ, 1976ರ (1976ರ ಕರ್ನಾಟಕ ಅಧಿನಿಯಮ 10) ಮೇರೆಗೆ ರಚಿಸಲಾದ ನ್ಯಾಯಾಧಿಕರಣ;

(ಎಲ್) ಕರ್ನಾಟಕ ರಾಜ್ಯದ ಯಾವುದಾದರೂ ಒಂದು ಪ್ರದೇಶದಲ್ಲಿ ಜಾರಿಯಲ್ಲಿರುವ ಯಾವುದೇ ಅಧಿನಿಯಮಿತಿ ಅಥವಾ ಕಾನೂನಿನ ಉಪಬಂಧದ ಉಲ್ಲೇಖಗಳು ಆ ಪ್ರದೇಶದಲ್ಲಿ ಜಾರಿಯಲ್ಲಿರುವ ಸಂವಾದಿ ಅಧಿನಿಯಮಿತಿ ಅಥವಾ ಕಾನೂನಿನ ಉಪಬಂಧ ಯಾವುದಾದರೂ ಇದ್ದರೆ ಅದಕ್ಕೆ ಸಂಬಂಧಿಸಿದಂತೆ ಮಾಡಿದ ಉಲ್ಲೇಖಗಳೆಂದು ಅರ್ಥೈಸತಕ್ಕುದು.

(ಎಲ್-1) **"ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ"** ಎಂದರೆ ಈ ಅಧಿನಿಯಮದ ಅಡಿಯಲ್ಲಿ ನೋಂದಣಿಯಾದ ಅಥವಾ ನೋಂದಣಿಯಾಗಿದೆ ಎಂದು ಭಾವಿಸಲಾದ ಮತ್ತು ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ ಸದಸ್ಯ ಬ್ಯಾಂಕೆಂದು ಸೇರಿಸಿಕೊಳ್ಳಲಾದ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ ಮತ್ತು ಇದರಲ್ಲಿ ರಜಿಸ್ಟ್ರಾರನು ಅಧಿಸೂಚಿಸಬಹುದಾದಂಥ ಮತ್ತು ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ ಸದಸ್ಯರೆಂದು ಸೇರಿಸಿಕೊಳ್ಳಬಹುದಾದಂಥ ವರ್ಗದ ಅಥವಾ ವರ್ಗಗಳ ಸಹಕಾರ ಸಂಘಗಳು ಒಳಗೊಳ್ಳುತ್ತವೆ.

***XX*** ***XX*** ***XX***

**12. ಸಹಕಾರ ಸಂಘದ ಉಪವಿಧಿಗಳ ತಿದ್ದುಪಡಿ.-** (1) ಸಹಕಾರ ಸಂಘದ ಯಾವುದೇ ಉಪವಿಧಿಯ ತಿದ್ದುಪಡಿಯು, ಈ ಅಧಿನಿಯಮದ ಮೇರೆಗೆ ನೋಂದಾಯಿತವಾದ ಹೊರತು ಅದು ಸಿಂಧುವಾಗತಕ್ಕುದಲ್ಲ.

(1ಎ.) ಅಂಥ ತಿದ್ದುಪಡಿಯ ಪ್ರತಿಯೊಂದು ಪ್ರಸ್ತಾವದ ಜೊತೆಗೆ ಗೊತ್ತುಪಡಿಸಬಹುದಾದಂಥ ಶುಲ್ಕವು ಇರತಕ್ಕುದು ಮತ್ತು ಸಹಕಾರ ಸಂಘಗಳ ಬೇರೆ ಬೇರೆ ವರ್ಗಕ್ಕೆ ಅಥವಾ ವರ್ಗಗಳಿಗೆ ಬೇರೆ ಬೇರೆ ಫೀಜನ್ನು ಗೊತ್ತುಪಡಿಸಬಹುದು

(5) ರಿಜಿಸ್ಟ್ರಾರನಿಗೆ ಸಹಕಾರ ಸಂಘದ ಹಿತದೃಷ್ಟಿಯಲ್ಲಿ ಅಂಥ ಸಂಘದ ಉಪವಿಧಿಗಳ ಯಾವುದೇ ತಿದ್ದುಪಡಿಯು ಅವಶ್ಯ ಅಥವಾ ಅಪೇಕ್ಷಣೀಯವೆಂದು ಕಂಡುಬಂದರೆ, ರಿಜಿಸ್ಟ್ರಾರನು, ಆದೇಶದ ಮೂಲಕ, ತಾನು ನಿಯಮಿಸಬಹುದಾದಂಥ ರೀತಿಯಲ್ಲಿ ಮತ್ತು ತಾನು ನಿರ್ದಿಷ್ಟಪಡಿಸಿದ ಸಮಯದೊಳಗೆ ತಾನು ಪ್ರಸ್ತಾವಿಸಿದ ತಿದ್ದುಪಡಿಯನ್ನು ಮಾಡುವಂತೆ ಆ ಸಹಕಾರ ಸಂಘವನ್ನು ನಿರ್ದೇಶಿಸಬಹುದು.

(6) ಸಹಕಾರ ಸಂಘವು ಸದರಿ ಆದೇಶದಲ್ಲಿ ನಿರ್ದಿಷ್ಟಪಡಿಸಲಾದ ಸಮಯದೊಳಗೆ ಅಂಥ ತಿದ್ದುಪಡಿಯನ್ನು ಮಾಡದಿದ್ದರೆ, ಈ ಅಧಿನಿಯಮದಲ್ಲಿ ಏನೇ ಇದ್ದರೂ, ರಿಜಿಸ್ಟ್ರಾರನು, ಸಹಕಾರ ಸಂಘಕ್ಕೆ ಸುನಾವಣೆಯ ಅವಕಾಶವನ್ನು ಕೊಟ್ಟ ತರುವಾಯ ಸದರಿ ತಿದ್ದುಪಡಿಯನ್ನು ನೋಂದಾಯಿಸಬಹುದು ಮತ್ತು ಅದರ ಪ್ರತಿಯನ್ನು ತಾನು ಸಹಿ ಮಾಡಿದ ಒಂದು ಪ್ರಮಾಣಪತ್ರದೊಂದಿಗೆ ಸಹಕಾರ ಸಂಘಕ್ಕೆ ಕಳುಹಿಸಿಕೊಡಬಹುದು ಮತ್ತು ಆ ಪ್ರಮಾಣಪತ್ರವು ತಿದ್ದುಪಡಿಯು ಯುಕ್ತವಾಗಿ ನೋಂದಾಯಿತವಾಗಿದೆ ಎಂಬುದಕ್ಕೆ ನಿರ್ಣಾಯಕ ಸಾಕ್ಷ್ಯವಾಗತಕ್ಕುದು.

***XX*** ***XX*** ***XX***

**14ಎ. ಸಾರ್ವಜನಿಕ ಹಿತದೃಷ್ಟಿಯಿಂದ ಸಮ್ಮಿಳನ, ವಿಭಜನೆ ಮತ್ತು ಪುನರ್ ರಚನೆಗೆ ನಿರ್ದೇಶಿಸಲು ಅಧಿಕಾರ.–** (1) ಈ ಅಧಿನಿಯಮದಲ್ಲಿ ಅಥವಾ ಅದರ ಮೇರೆಗೆ ರಚಿಸಲಾದ ನಿಯಮದಲ್ಲಿ ಮತ್ತು ಸಂಬಂಧಪಟ್ಟ ಸಹಕಾರ ಸಂಘಗಳ ಉಪವಿಧಿಗಳಲ್ಲಿ ಏನೇ ಒಳಗೊಂಡಿದ್ದರೂ, ಸಾರ್ವಜನಿಕ ಹಿತದೃಷ್ಟಿಯಿಂದ ಅಥವಾ ಸಹಕಾರ ಚಳವಳಿಯ ಹಿತದೃಷ್ಟಿಯಿಂದ ಅಥವಾ ಸಹಕಾರ ಸಂಘಗಳ ಆರ್ಥಿಕ ಸಾಮರ್ಥ್ಯದ ವಿಷಯದಲ್ಲಿ ರಾಜಿ ಮಾಡಿಕೊಳ್ಳದೆ, ಯಾವುವೇ ಸಹಕಾರ ಸಂಘಗಳ ಸೂಕ್ತ ಆಡಳಿತ ನಿರ್ವಹಣೆಯನ್ನು ಖಚಿತಪಡಿಸುವ ಉದ್ದೇಶಕ್ಕಾಗಿ, ಯಾವುವೇ ಎರಡು ಅಥವಾ ಹೆಚ್ಚು ಸಹಕಾರ ಸಂಘಗಳನ್ನು ಒಂದೇ ಸಹಕಾರ ಸಂಘವಾಗಿ ಸಮ್ಮಿಳನಗೊಳಿಸಬೇಕೆಂದು ಅಥವಾ ಯಾವುದೇ ಸಹಕಾರ ಸಂಘವನ್ನು ವಿಭಜಿಸಬೇಕೆಂದು ಅಥವಾ ಯಾವುವೇ ಸಹಕಾರ ಸಂಘವನ್ನು ಪುನರ್‌ರಚಿಸಬೇಕೆಂದು ರಿಜಿಸ್ಟ್ರಾರನಿಗೆ ಮನದಟ್ಟಾದರೆ, ರಿಜಿಸ್ಟ್ರಾರನು ಅಂಥ ಸಹಕಾರ ಸಂಘಗಳ ಸಮ್ಮಿಳನಕ್ಕೆ, ವಿಭಜನೆಗೆ ಅಥವಾ ಪುನರ್‌ರಚನೆಗೆ ಆದೇಶಿಸತಕ್ಕದ್ದು:

ಪರಂತು, ಸಹಕಾರ ಬ್ಯಾಂಕಿನ ಸಂದರ್ಭದಲ್ಲಿ, ರಿಸರ್ವ್ ಬ್ಯಾಂಕಿನ ಲಿಖಿತ ಪೂರ್ವಾನುಮೋದನೆಯನ್ನು ಪಡೆಯದೆ ಈ ಉಪಪ್ರಕರಣದ ಮೇರೆಗೆ ಯಾವುದೇ ಆದೇಶವನ್ನು ಮಾಡತಕ್ಕದ್ದಲ್ಲ.

(2) (1)ನೇ ಉಪ ಪ್ರಕರಣದ ಮೇರೆಗಿನ ಯಾವುದೇ ಆದೇಶವನ್ನು, ರಿಜಿಸ್ಟ್ರಾರನು, ಅಥವಾ ಯಾರೇ ಇತರ ಅಧಿಕಾರಿಯು, ಅಂಥ ಆದೇಶದಿಂದ ಬಾಧಿತವಾಗಬಹುದಾದ ಯಾವುದೇ ಸಹಕಾರ ಸಂಘಕ್ಕೆ ಅಥವಾ ವ್ಯಕ್ತಿಗೆ, ಮನವಿ ಸಲ್ಲಿಸಲು ಅಥವಾ ಅಹವಾಲನ್ನು ಹೇಳಿಕೊಳ್ಳಲು ಒಂದು ಅವಕಾಶವನ್ನು ನೀಡದ ಹೊರತು ಮಾಡತಕ್ಕದ್ದಲ್ಲ.

(3) ಆ ಆದೇಶವು,–

(ಎ) ಸಮ್ಮಿಳನಗೊಂಡ, ವಿಭಜನೆಗೊಂಡ ಅಥವಾ ಪುನರ್‌ರಚಿಸಿದ ಸಹಕಾರ ಸಂಘದ ಅಥವಾ ಸಂಘಗಳ ಆಸ್ತಿಗಳ ಮತ್ತು ಹೊಣೆಗಾರಿಕೆಗಳ ಪ್ರಾಪ್ತಿಗಾಗಿ ಮತ್ತು ಆ ಪ್ರಾಪ್ತಿಯು ಯಾವ ದಿನಾಂಕದಂದು ಜಾರಿಗೆ ಬರುವುದೋ ಆ ದಿನಾಂಕದ ಬಗ್ಗೆ ಉಪಬಂಧಿಸತಕ್ಕದ್ದು;

(ಬಿ)(i) ಮೊದಲ ಸಮಿತಿಯ ರಚನೆ, ಸದಸ್ಯರ ಸಂಖ್ಯೆ, ಹೆಸರುಗಳು ಮತ್ತು (ಅಧ್ಯಕ್ಷನನ್ನೂ ಒಳಗೊಂಡಂತೆ) ಸದಸ್ಯರ ಪದಾವಧಿಯನ್ನು ನಿರ್ದಿಷ್ಟಪಡಿಸತಕ್ಕದ್ದು;

(ii) ಹೊಸ ಸಹಕಾರ ಸಂಘದ ಅಥವಾ ಸಂದರ್ಭಾನುಸಾರ ಪ್ರತಿಯೊಂದು ಸಹಕಾರ ಸಂಘಗಳ ವ್ಯವಸ್ಥಾಪಕ ನಿರ್ದೇಶಕನ/ಕಾರ್ಯದರ್ಶಿಯ ಪೈಕಿ ಯಾರು 29 ಜಿ ಪ್ರಕರಣಕ್ಕೆ ಒಳಪಡತಕ್ಕದ್ದು ಎಂಬುದನ್ನು ನಿರ್ದಿಷ್ಟಪಡಿಸತಕ್ಕದ್ದು; ಮತ್ತು

(iii) ಅಧಿನಿಯಮದ ಮತ್ತು ನಿಯಮಗಳ ಉಪಬಂಧಗಳಿಗೆ ಅನುಸಾರವಾಗಿ ತಿದ್ದುಪಡಿಯಾಗುವವರೆಗೆ ಹೊಸ ಸಹಕಾರ ಸಂಘವು ಅಥವಾ ಪ್ರತಿಯೊಂದು ಹೊಸ ಸಹಕಾರ ಸಂಘಗಳು, ಯಾವ ಉಪವಿಧಿಗಳನ್ನು ಅನುಸರಿಸಬೇಕೋ ಆ ಉಪವಿಧಿಗಳನ್ನು ನಿರ್ದಿಷ್ಟಪಡಿಸತಕ್ಕದ್ದು:

ಪರಂತು ರಿಜಿಸ್ಟ್ರಾರನು, ಆದೇಶದ ಮೂಲಕ, (i)ನೇ ಉಪ ಖಂಡದ ಮೇರೆಗಿನ ಅವಧಿಯನ್ನು ಮೊಟಕುಗೊಳಿಸಬಹುದು ಮತ್ತು ಹಾಗೆ ಮೊಟಕುಗೊಳಿಸಲಾದ ಅವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ ಸಹಕಾರ ಸಂಘದ ಮಹಾಸಭೆಯನ್ನು ನಡೆಸಲು ಮತ್ತು ಚುನಾವಣೆಗಳನ್ನು ನಡೆಸಲು ಅವಶ್ಯಕ ಕ್ರಮಗಳನ್ನು ಕೈಗೊಳ್ಳಬಹುದು.

(4) (3)ನೇ ಉಪ ಪ್ರಕರಣದ ಮೇರೆಗೆ ಮಾಡಿದ ಪ್ರತಿಯೊಂದು ಆದೇಶವನ್ನು ಸರ್ಕಾರಿ ರಾಜ್ಯಪತ್ರದಲ್ಲಿ ಪ್ರಕಟಿಸತಕ್ಕದ್ದು ಮತ್ತು ಆ ಆದೇಶದಲ್ಲಿ ಅನ್ಯಥಾ ನಿರ್ದಿಷ್ಟಪಡಿಸಿದ್ದ ಹೊರತು, ಅದು ಅಂಥ ಪ್ರಕಟಣೆಯ ದಿನಾಂಕದಂದು ಜಾರಿಗೆ ಬರತಕ್ಕದ್ದು.

(5) (1)ನೇ ಉಪ ಪ್ರಕರಣದಲ್ಲಿ ಉಲ್ಲೇಖಿಸಲಾದ ಆದೇಶವು, ಸಮ್ಮಿಳನವನ್ನು ಅಥವಾ ವಿಭಜನೆಯನ್ನು ಅಥವಾ ಪುನರ್ ರಚನೆಯನ್ನು ಜಾರಿಗೊಳಿಸಲು ಅಗತ್ಯವೆಂದು ರಿಜಿಸ್ಟ್ರಾರನು ಅಭಿಪ್ರಾಯಪಡಬಹುದಾದಂಥ ಪ್ರಾಸಂಗಿಕ, ಆನುಷಂಗಿಕ ಮತ್ತು ಪೂರಕ ಉಪಬಂಧಗಳನ್ನು ಒಳಗೊಂಡಿರಬಹುದು.

(6) ಸ್ವತ್ತು ವರ್ಗಾವಣೆ ಅಧಿನಿಯಮ, 1882 (1882ರ ಕೇಂದ್ರ ಅಧಿನಿಯಮ 4)ರಲ್ಲಿ ಅಥವಾ ನೋಂದಣಿ ಅಧಿನಿಯಮ, 1908 (1908ರ ಕೇಂದ್ರ ಅಧಿನಿಯಮ 16)ರಲ್ಲಿ ಏನೇ ಒಳಗೊಂಡಿದ್ದರೂ, ಸಮ್ಮಿಳನದ ಸಂದರ್ಭದಲ್ಲಿ, ಸಮ್ಮಿಳನಗೊಂಡ ಸಹಕಾರ ಸಂಘದ ನೋಂದಣಿಯನ್ನು, ಮತ್ತು ವಿಭಜನೆಯ ಸಂದರ್ಭದಲ್ಲಿ, ಹೊಸ ಸಹಕಾರ ಸಂಘಗಳ ನೋಂದಣಿಯನ್ನು, ಸಮ್ಮಿಳನದ ಅಥವಾ ವಿಭಜನೆಯ ಆದೇಶದಲ್ಲಿ ನಿರ್ದಿಷ್ಟಪಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಆ ಪ್ರತಿಯೊಂದು ಸಂದರ್ಭದಲ್ಲಿ ಸಮ್ಮಿಳನಗೊಳ್ಳುತ್ತಿರುವ ಸಹಕಾರ ಸಂಘಗಳ ಅಥವಾ ಮೂಲ ಸಹಕಾರ ಸಂಘದ

ಆಸ್ತಿಗಳು ಮತ್ತು ಹೊಣೆಗಾರಿಕೆಗಳು ಸಮ್ಮಿಳನಗೊಂಡ ಸಹಕಾರ ಸಂಘದಲ್ಲಿ ಅಥವಾ ಸಂದರ್ಭಾನುಸಾರ, ಹೊಸ ಸಹಕಾರ ಸಂಘಗಳಲ್ಲಿ, ನಿಹಿತಗೊಳ್ಳಲು ಸಾಕಷ್ಟು ಹಸ್ತಾಂತರಣವಾಗಿರತಕ್ಕದ್ದು.

(7) ಸಹಕಾರ ಸಂಘದ ಸಮ್ಮಿಳನವು ಅಥವಾ ವಿಭಜನೆಯು ಅಥವಾ ಪುನರ್ ರಚನೆಯು ಹಾಗೆ ಸಮ್ಮಿಳನಗೊಳಿಸಿದ ಸಹಕಾರ ಸಂಘಗಳ ಅಥವಾ ಹಾಗೆ ವಿಭಜನೆಗೊಳಿಸಿದ ಅಥವಾ ಪುನರ್ ರಚಿಸಿದ ಸಹಕಾರ ಸಂಘದ ಯಾವುದೇ ಹಕ್ಕಿಗೆ ಅಥವಾ ಹೊಣೆಗಾರಿಕೆಗೆ ಬಾಧಕವನ್ನುಂಟುಮಾಡತಕ್ಕದ್ದಲ್ಲ, ಅಥವಾ ಹಾಗೆ ಸಮ್ಮಿಳನಗೊಳಿಸಿದ ಅಥವಾ ವಿಭಜನೆಗೊಳಿಸಿದ ಅಥವಾ ಪುನರ್ ರಚಿಸಿದ ಸಹಕಾರ ಸಂಘಗಳು ಅಥವಾ ಅವುಗಳ ವಿರುದ್ಧ, ಮುಂದುವರೆಸಬಹುದಾಗಿದ್ದ ಅಥವಾ ಪ್ರಾರಂಭಿಸಬಹುದಾಗಿದ್ದ ಯಾವುದೇ ಕಾನೂನು ವ್ಯವಹರಣೆಗಳನ್ನು ದೋಷಯುಕ್ತವನ್ನಾಗಿ ಮಾಡತಕ್ಕದ್ದಲ್ಲ ಮತ್ತು ತದನುಸಾರವಾಗಿ ಅಂಥ ಕಾನೂನು ವ್ಯವಹರಣೆಗಳನ್ನು, ಸಂದರ್ಭಾನುಸಾರ, ಸಮ್ಮಿಳನಗೊಳಿಸಿದ ಸಹಕಾರ ಸಂಘವು, ಪುನರ್ ರಚಿಸಿದ ಸಹಕಾರ ಸಂಘವು ಅಥವಾ ಹೊಸ ಸಹಕಾರ ಸಂಘವು ಅಥವಾ ಅದರ ವಿರುದ್ಧ, ಮುಂದುವರೆಸಬಹುದು ಅಥವಾ ಪ್ರಾರಂಭಿಸಬಹುದು.

**XX** **XX** **XX**

**16. ಸದಸ್ಯರಾಗಬಹುದಾದ ವ್ಯಕ್ತಿಗಳು.**- (1) 17ನೇ ಪ್ರಕರಣದ ಉಪಬಂಧಗಳಿಗೊಳಪಟ್ಟು ಈ ಮುಂದಿನವನ್ನು ಹೊರತುಪಡಿಸಿ ಯಾರೇ ವ್ಯಕ್ತಿಗೆ ಸಹಕಾರ ಸಂಘದ ಸದಸ್ಯರನ್ನಾಗಿ ಪ್ರವೇಶ ನೀಡತಕ್ಕುದಲ್ಲ, ಎಂದರೆ:-

(ಎ) ಕರಾರು ಅಧಿನಿಯಮ, 1872ರ (1872ರ ಕೇಂದ್ರಾಧಿನಿಯಮ 1872ರ IX) ರ ಮೇರೆಗೆ ಕರಾರು ಮಾಡಿಕೊಳ್ಳಲು ಸಕ್ಷಮನಾದ ವ್ಯಕ್ತಿ;

**XX** **XX** **XX**

(4) ಪ್ರತಿಯೊಂದು ಸಹಕಾರ ಸಂಘವು, ಅಂಥ ಸಂಘಕ್ಕೆ ಪ್ರವೇಶ ಕೋರುವ ಅರ್ಜಿಯು ತಲುಪಿದ ದಿನಾಂಕದಿಂದ ಮೂರು ತಿಂಗಳೊಳಗಾಗಿ ಅಂಥ ವ್ಯಕ್ತಿಯನ್ನು ಸದಸ್ಯನಾಗಿ ಸೇರಿಸಿಕೊಳ್ಳತಕ್ಕುದು ಅಥವಾ ಸೇರಿಸಿಕೊಳ್ಳಲು ನಿರಾಕರಿಸತಕ್ಕುದು ಮತ್ತು ಅಂಥ ಯುಕ್ತ ಅವಧಿಯೊಳಗಾಗಿ ಪ್ರವೇಶ ನೀಡಿದ ಬಗ್ಗೆ ಅಥವಾ ನಿರಾಕರಣೆಯ ಬಗ್ಗೆ ಅರ್ಜಿದಾರನಿಗೆ ಲಿಖಿತ ಪತ್ರವನ್ನು ಕಳಿಸತಕ್ಕುದು. ಸದಸ್ಯನಾಗಲು ಪ್ರವೇಶದ ಬಗ್ಗೆ ಅಂಥ ಯುಕ್ತ ಅವಧಿಯೊಳಗಾಗಿ ಅರ್ಜಿದಾರನಿಗೆ ಯಾವ ಸೂಚನೆಯೂ ತಲುಪದಿದ್ದರೆ, ಅವನ ಪ್ರವೇಶ ಕೋರುವ ಅರ್ಜಿಯನ್ನು 105ಎ ಪ್ರಕರಣದ ಉದ್ದೇಶಗಳಿಗಾಗಿ ಯುಕ್ತ ಅವಧಿಯ ಕೊನೆಯ ದಿನದಂದು ಆ ಸಹಕಾರ ಸಂಘವು ನಿರಾಕರಿಸಿತ್ತೆಂದು ಭಾವಿಸತಕ್ಕುದು.

(5) ಹಿಂದಿನ ಉಪಪ್ರಕರಣಗಳಲ್ಲಿ ಅಥವಾ 18ನೇ ಪ್ರಕರಣದಲ್ಲಿ ಅಥವಾ ರಾಜ್ಯಸರ್ಕಾರವು, ಅಧಿಸೂಚನೆಯ ಮೂಲಕ, ನಿರ್ದಿಷ್ಟಪಡಿಸಬಹುದಾದಂಥ ಸಹಕಾರ ಸಂಘ ಅಥವಾ ಸಹಕಾರ ಸಂಘಗಳ ವರ್ಗಗಳ ನಿಯಮಗಳು ಮತ್ತು ಉಪವಿಧಿಗಳಲ್ಲಿ ಏನೇ ಇದ್ದರೂ, ಅಂಥ ಸಹಕಾರ ಸಂಘದ ಸದಸ್ಯನಾಗಲು ಪ್ರವೇಶವನ್ನು ಕೋರಿ ಅರ್ಜಿಯನ್ನು ಸಲ್ಲಿಸುವ ವ್ಯಕ್ತಿಯು, ಅಂಥ ಅರ್ಜಿಯನ್ನು ಸ್ವೀಕರಿಸಿದ ದಿನಾಂಕದಿಂದ ಅಂಥ ಸಹಕಾರ ಸಂಘದ ಸಹ ಸದಸ್ಯನಾಗಿ ಪ್ರವೇಶ ಪಡೆದಿರುವನೆಂದು ಭಾವಿಸತಕ್ಕುದು.

(6) ಸಂಘವು ಯುಕ್ತ ದಿನಾಂಕದಿಂದ ಅರವತ್ತು ದಿನಗಳ ಒಳಗೆ ಅಂಥ ಪ್ರವೇಶಕ್ಕೆ ಆಕ್ಷೇಪಿಸಿ ಅರ್ಜಿಯನ್ನು ರಿಜಿಸ್ಟ್ರಾರನಿಗೆ ಸಲ್ಲಿಸದಿದ್ದಲ್ಲಿ ಅಂಥ ವ್ಯಕ್ತಿಯು ಸದಸ್ಯನಾಗಿ ಪ್ರವೇಶ ಪಡೆದಿರುವುದಾಗಿ ಭಾವಿಸತಕ್ಕುದು.

(7) (6)ನೇ ಉಪಪ್ರಕರಣದ ಮೇರೆಗೆ ಅರ್ಜಿಯನ್ನು ಸಲ್ಲಿಸಿರುವಲ್ಲಿ, ರಿಜಿಸ್ಟ್ರಾರನು, ಆ ವ್ಯಕ್ತಿಗೆ ಮತ್ತು ಸಂಬಂಧಿಸಿದ ಸಹಕಾರ ಸಂಘಕ್ಕೆ ಮನವಿ ಮಾಡಿಕೊಳ್ಳಲು ಅವಕಾಶವನ್ನು ನೀಡಿದ ತರುವಾಯ, ಆ ವ್ಯಕ್ತಿಯು 17ನೇ ಪ್ರಕರಣದ ಮೇರೆಗೆ ಸದಸ್ಯನಾಗಲು ಅನರ್ಹನಲ್ಲದ ವ್ಯಕ್ತಿ ಎಂದು ಅವನಿಗೆ ಕಂಡುಬಂದಲ್ಲಿ ಆದೇಶದ ಮೂಲಕ ಆ ಅರ್ಜಿಯನ್ನು ತಿರಸ್ಕರಿಸತಕ್ಕುದು ಮತ್ತು ಆ ತರುವಾಯ ವ್ಯಕ್ತಿಯು, ಸಂಬಂಧಪಟ್ಟ ಸಹಕಾರ ಸಂಘದ ಸದಸ್ಯನಾಗಿ ಪ್ರವೇಶ ಪಡೆದಿರುವನೆಂದು ಭಾವಿಸತಕ್ಕುದು.

**XX** **XX** **XX**

**17. ಸದಸ್ಯತ್ವಕ್ಕೆ ಅನರ್ಹತೆ.**- (1) ಯಾರೇ ವ್ಯಕ್ತಿಯು,-

**XX** **XX** **XX**

(ಡಿ) ಅದೇ ಬಗೆಯ ವ್ಯವಹಾರವನ್ನು ನಡೆಸುತ್ತಿರುವ ಸಹಕಾರ ಸಂಘಕ್ಕೆ ಅದಾಗಲೇ ಸದಸ್ಯನಾಗಿದ್ದರೆ

- ಅವನು ಸದಸ್ಯನಾಗಿ ಪ್ರವೇಶ ಪಡೆಯಲು ಅರ್ಹನಾಗತಕ್ಕುದಲ್ಲ.

**XX** **XX** **XX**

**18ಎ. ಸದಸ್ಯತ್ವದ ಸಮಾಪ್ತಿ.**- ಒಬ್ಬ ವ್ಯಕ್ತಿಯು ಒಂದು ಸಹಕಾರ ಸಂಘದ ಸದಸ್ಯನಾಗಿರುವುದು,-

(ಎ) ಒಬ್ಬ ವ್ಯಕ್ತಿಯಾಗಿದ್ದಲ್ಲಿ ಆತನು ಅಥವಾ ಆಕೆಯು,-

(i) ಮರಣ ಹೊಂದಿದಾಗ;

(ii) ರಾಜೀನಾಮೆ ನೀಡಿದಾಗ;

(iii) ಸಹಕಾರ ಸಂಘದ ಉಪವಿಧಿಗಳಿಗೆ ಅನುಸಾರವಾಗಿ ವಜಾಗೊಂಡಾಗ ಅಥವಾ ಉಚ್ಚಾಟನೆಗೊಂಡಾಗ; ಅಥವಾ

**XX** **XX** **XX**

**20. ಸದಸ್ಯರ ಮತಗಳು.**- (1) ಸಹಕಾರ ಸಂಘದ ಯಾರೇ ಸದಸ್ಯನು ಸಂಘದ ವ್ಯವಹಾರಗಳಲ್ಲಿ ಒಂದಕ್ಕಿಂತ ಹೆಚ್ಚು ಮತವನ್ನು ಹೊಂದಿರತಕ್ಕುದಲ್ಲ:

ಪರಂತು, ರಾಜ್ಯಸರ್ಕಾರವು ಸಹಕಾರ ಸಂಘದ ಸದಸ್ಯನಾಗಿರುವಲ್ಲಿ, ರಾಜ್ಯ ಸರ್ಕಾರವು ಅಂಥ ಸಹಕಾರ ಸಂಘದ ಸಮಿತಿಗೆ ನಾಮನಿರ್ದೇಶಿತನಾದ ಅಥವಾ ನಾಮನಿರ್ದೇಶಿತನೆಂದು ಭಾವಿಸಲಾದ ಪ್ರತಿಯೊಬ್ಬ ವ್ಯಕ್ತಿಯು ಒಂದು ಮತವನ್ನು ಹೊಂದಿರತಕ್ಕುದು.

(2) ಈ ಕೆಳಕಂಡ ವ್ಯಕ್ತಿಗಳು, ತಾವು ಸದಸ್ಯರಾಗಿರುವ ಸಹಕಾರ ಸಂಘದ ಸಭೆಯಲ್ಲಿ ಮತಚಲಾಯಿಸಲು ಹಕ್ಕನ್ನು ಹೊಂದಿರತಕ್ಕುದಲ್ಲ, ಎಂದರೆ:-

(ಎ) ನಾಮ ಮಾತ್ರ ಸದಸ್ಯ ಅಥವಾ ಸಹವರ್ತಿ ಸದಸ್ಯ;

(ಎ-i) ಬಾಕಿದಾರನಾದ ಒಬ್ಬ ಸದಸ್ಯ;

(ಎ-ii) 16ನೇ ಪ್ರಕರಣದ (1)ನೇ ಉಪಪ್ರಕರಣದ (ಡಿ), (ಇ), (ಎಫ್), ಮತ್ತು (ಜಿ) ಖಂಡಗಳ ಮೇರೆಗೆ ಸೇರಿಸಿಕೊಂಡ ಬಾಕಿದಾರರಾಗಿರುವ ಸದಸ್ಯರು;

(ಎ iii) ಅಂಥ ಸಭೆಯ ದಿನಾಂಕಕ್ಕೆ ಮುಂಚಿತವಾಗಿ ಹನ್ನೆರಡು ತಿಂಗಳ ಒಳಗೆ ಸಂಘದ ಸದಸ್ಯನಾದ ಒಬ್ಬ ವ್ಯಕ್ತಿ;

ಪರಂತು, ಈ ಖಂಡದಲ್ಲಿರುವುದು ಯಾವುದೂ, ಅದರ ನೋಂದಣಿಯಾದ ತರುವಾಯ ತಕ್ಷಣವೇ ನಡೆದ ಅಂಥ ಸಂಘದ ಮೊದಲ ಸರ್ವಸದಸ್ಯರ ಸಭೆಯಲ್ಲಿ ಭಾಗವಹಿಸುವ ಸಂಘದ ಸದಸ್ಯನಿಗೆ ಅನ್ವಯವಾಗತಕ್ಕುದಲ್ಲ.

(ಬಿ) (i) ಯಾವ ಸಹಕಾರ ಸಂಘದ ಸಮಿತಿಯು ರದ್ದಾಗಿದೆಯೋ ಅಥವಾ ಯಾವುದಕ್ಕೆ ಈ ಅಧಿನಿಯಮದ 31ನೇ ಪ್ರಕರಣದ ಮೇರೆಗೆ ವಿಶೇಷ ಅಧಿಕಾರಿಯನ್ನು ನೇಮಿಸಲಾಗಿದೆಯೋ;

(ii) ಯಾವ ಸಹಕಾರ ಸಂಘವು 12ನೇ ಪ್ರಕರಣದ ಮೇರೆಗೆ ವಿಘಟಿತವಾಗಬೇಕೆಂದು ಆದೇಶಿಸಲಾಗಿದೆಯೋ;

(iii) ಯಾವ ಸಹಕಾರ ಸಂಘವು ತನ್ನ ಕಾರ್ಯವನ್ನು ಪ್ರಾರಂಭಿಸಿಲ್ಲವೋ ಅಥವಾ ತನ್ನ ಕಾರ್ಯವನ್ನು ನಿಲ್ಲಿಸಿದೆಯೋ;

(iv) ಯಾವ ಸಹಕಾರ ಸಂಘದ ಮೂಲ ಉದ್ದೇಶವು ಸಾಲವನ್ನು ನೀಡುವುದಾಗಿದೆಯೋ ಮತ್ತು ಸಭೆ ನಡೆದ ಸಹಕಾರ ವರ್ಷದ ನಿಕಟಪೂರ್ವ ಸಹಕಾರ ವರ್ಷದ ವಸೂಲಿಯು, ಒಟ್ಟು ತಗಾದೆಯ ಶೇಕಡಾ ಎಪ್ಪತ್ತೈದಕ್ಕಿಂತ ಕಡಿಮೆ ಆಗಿರುವುದೋ ಮತ್ತು ಸಂದರ್ಭಾನುಸಾರ ತಾನು ಋಣಿಯಾಗಿರುವ ಹಣಕಾಸು ಬ್ಯಾಂಕಿಗೆ ಅಥವಾ ಸಾಲ ನೀಡುವ ಏಜೆನ್ಸಿಗೆ:-

(ಎ) ಸಂಘದ ತಗಾದೆಯು ಹಣಕಾಸು ಬ್ಯಾಂಕಿನ ಅಥವಾ ಸಾಲ ನೀಡಿಕೆ ಏಜೆನ್ಸಿಯ ತಗಾದೆಗಿಂತ ಕಡಿಮೆಯಾಗಿದ್ದರೆ, ಸಂಘದ ತಗಾದೆಯ ಶೇ.75 ರಷ್ಟನ್ನು, ಅಥವಾ

(ಬಿ) ಸಂಘದ ತಗಾದೆಯು ಹಣಕಾಸು ಬ್ಯಾಂಕಿನ ಅಥವಾ ಸಾಲ ನೀಡಿಕೆ ಏಜೆನ್ಸಿಯ ತಗಾದೆಗಿಂತ ಹೆಚ್ಚಾಗಿದ್ದರೆ, ಹಣಕಾಸು ಬ್ಯಾಂಕಿನ ಅಥವಾ ಸಾಲನೀಡಿಕೆ ಏಜೆನ್ಸಿಯ ವಾಸ್ತವಿಕ ತಗಾದೆಯಷ್ಟನ್ನು, ಸದರಿ ಸಹಕಾರ ವರ್ಷ ಮುಗಿದ ಹದಿನೈದು ದಿನಗಳಿಗಿಂತ ತಡವಾಗದಂತೆ ವರ್ಗಾವಣೆ ಮಾಡಲು ವಿಫಲವಾಗಿದೆಯೋ.

***XX*** ***XX*** ***XX***

**21. ಮತ ಚಲಾಯಿಸುವ ರೀತಿ.-** (1) ಪ್ರತಿಯೊಬ್ಬ ಸದಸ್ಯನು, ಪ್ರತಿಯೊಬ್ಬ ಪ್ರತಿನಿಧಿ ಮತ್ತು ಪ್ರತಿಯೊಬ್ಬ ನಾಮನಿರ್ದೇಶಿತನು ತನ್ನ ಮತವನ್ನು ಖುದ್ದಾಗಿ ಚಲಾಯಿಸತಕ್ಕುದು, ಆದರೆ ಪರೋಕ್ಷವಾಗಿ ಅಲ್ಲ.

***XX*** ***XX*** ***XX***

**26. ಸಹಕಾರ ಸಂಘದಲ್ಲಿ ಅಂತಿಮ ಅಧಿಕಾರ.-** ಈ ಅಧಿನಿಯಮ, ನಿಯಮಗಳು ಮತ್ತು ಉಪವಿಧಿಗಳ ಉಪಬಂಧಗಳಿಗೆ ಒಳಪಟ್ಟು, ಸಹಕಾರ ಸಂಘದ ಅಂತಿಮ ಅಧಿಕಾರವು ಸರ್ವ ಸದಸ್ಯರಲ್ಲಿ ನಿಹಿತವಾಗಿರತಕ್ಕುದು:

ಪರಂತು, ಈ ಉಪಪ್ರಕರಣದಲ್ಲಿ ಇರುವುದು ಯಾವುದೂ, ಈ ಅಧಿನಿಯಮ ಅಥವಾ ನಿಯಮಗಳು ಅಥವಾ ಉಪವಿಧಿಗಳಿಂದ ಯಾವೊಂದು ಸಮಿತಿಗೆ, ಅಥವಾ ಯಾವೊಬ್ಬ ಪದಾಧಿಕಾರಿಗೆ ಪ್ರದತ್ತವಾದ ಯಾವುದೇ ಅಧಿಕಾರವನ್ನು, ಅಂಥ ಸಮಿತಿಯು ಅಥವಾ ನೋಂದಾಯಿತ ಸಹಕಾರ ಸಂಘದ ಯಾರೇ ಪದಾಧಿಕಾರಿಯು ಚಲಾಯಿಸುವುದಕ್ಕೆ ಬಾಧಕವಾಗತಕ್ಕುದಲ್ಲ.

(2) (1)ನೇ ಉಪಪ್ರಕರಣದಲ್ಲಿ ಏನೇ ಇದ್ದರೂ,-

(ಎ) ಒಂದು ಸಹಕಾರ ಸಂಘದ ಕಾರ್ಯ ಕ್ಷೇತ್ರವು ನಿಯಮಿಸಬಹುದಾದ ಕ್ಷೇತ್ರಕ್ಕಿಂತ ಕಡಿಮೆಯಾಗಿಲ್ಲದಿರುವಲ್ಲಿ; ಅಥವಾ

(ಬಿ) ಸಹಕಾರ ಸಂಘವು ನಿಯಮಿಸಬಹುದಾದ ಸಂಖ್ಯೆಗಿಂತ ಕಡಿಮೆಯಿಲ್ಲದ ಸಂಖ್ಯೆಯ ಸದಸ್ಯರನ್ನು ಹೊಂದಿರುವಲ್ಲಿ

- ರಿಜಿಸ್ಟ್ರಾರನು, ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಂತೆ ಸರ್ವಸದಸ್ಯರ ಎಲ್ಲಾ ಅಧಿಕಾರಗಳನ್ನು ಅಥವಾ ಅವುಗಳ ಪೈಕಿ ಯಾವುದನ್ನಾದರೂ ಚಲಾಯಿಸಲು ನಿಯಮಗಳಿಗನುಸಾರವಾಗಿ ನಿಯಮಿಸಬಹುದಾದಂತೆ ಆಯ್ಕೆ ಮಾಡಲಾದ ಸಹಕಾರ ಸಂಘದ ಅಷ್ಟು ಸದಸ್ಯರನ್ನೊಳಗೊಂಡ (ಇಲ್ಲಿ ಇನ್ನು ಮುಂದೆ ಪ್ರಾತಿನಿಧಿಕ ಸರ್ವಸದಸ್ಯರ ನಿಕಾಯ ಎಂದು ಕರೆಯಲಾಗುವ) ಒಂದು ಚಿಕ್ಕ ನಿಕಾಯವನ್ನು ರಚಿಸಲು ಉಪಬಂಧಿಸಿ, ಸಹಕಾರ ಸಂಘದ ಉಪವಿಧಿಗಳನ್ನು ತಿದ್ದುಪಡಿ ಮಾಡಬಹುದು ಮತ್ತು ಈ ಅಧಿನಿಯಮದಲ್ಲಿ ಸರ್ವಸದಸ್ಯರ ನಿಕಾಯ ಅಥವಾ ಅದರ ಸಭೆಯನ್ನು ಯಾವುದೇ ರೂಪದಲ್ಲಿ ಅಥವಾ ಪದಗಳಲ್ಲಿ ಮಾಡಲಾದ ಯಾವುದೇ ಉಲ್ಲೇಖವು, ಅಂಥ ಉಲ್ಲೇಖವು, ಸಂದರ್ಭಾನುಸಾರ, ಪ್ರಾತಿನಿಧಿಕ ಸರ್ವಸದಸ್ಯರ ನಿಕಾಯ ಅಥವಾ ಅದರ ಸಭೆಗೆ ಮಾಡಿದ ಉಲ್ಲೇಖವಾಗಿದ್ದರೆ ಹೇಗೋ ಹಾಗೆ ಜಾರಿಯಾಗತಕ್ಕುದು.

(3) ರಿಜಿಸ್ಟ್ರಾರನು (2)ನೇ ಉಪಪ್ರಕರಣದ ಮೇರೆಗೆ ಉಪವಿಧಿಗಳಿಗೆ ಮಾಡಿದ ತಿದ್ದುಪಡಿಗಳನ್ನು 12ನೇ ಪ್ರಕರಣದ ಮೇರೆಗೆ ನೋಂದಾಯಿಸಲಾಗಿದೆ ಎಂದು ಭಾವಿಸತಕ್ಕುದು.

(4) ಪ್ರಾತಿನಿಧಿಕ ಸರ್ವಸದಸ್ಯರ ನಿಕಾಯವು ಯಾವುದೇ ಅಧಿಕಾರವನ್ನು ಚಲಾಯಿಸುವುದು, ನಿಯಮಗಳು ಅಥವಾ ಉಪವಿಧಿಗಳು ನಿಯಮಿಸಬಹುದಾದಂಥ ನಿರ್ಬಂಧಗಳು ಮತ್ತು ಷರತ್ತುಗಳಿಗೆ ಒಳಪಟ್ಟಿರತಕ್ಕುದು.

**XX** **XX** **XX**

**27. ವಾರ್ಷಿಕ ಮಹಾ ಸಭೆ.**- (1) ಪ್ರತಿಯೊಂದು ಸಹಕಾರ ಸಂಘವು,-

(ಎ) ಸಮಿತಿಯು ಮಂಡಿಸಿದ ವಾರ್ಷಿಕ ವರದಿಯ ಪರಿಶೀಲನೆಯ;

(ಬಿ) ಲಭ್ಯವಿರುವ ಇತ್ತೀಚಿನ ಲೆಕ್ಕ ಪರಿಶೋಧನಾ ವರದಿ ಮತ್ತು ಅದರ ಮೇಲಿನ ಸಮಿತಿಯ ವರದಿಯ ಪರಿಶೀಲನೆಯ;

(ಸಿ) ವಿಚಾರಣಾ ವರದಿ ಯಾವುದಾದರೂ ಇದ್ದರೆ, ಅದರ ಪರಿಶೀಲನೆಯ;

(ಡಿ) ನಿವ್ವಳ ಲಾಭಗಳ ವಿಲೆಯ;

(ಇ) ಕಾರ್ಯಾಚರಣೆಯಲ್ಲಿ ಕೊರತೆ ಏನಾದರೂ ಇದ್ದರೆ ಅದರ ಪುನರವಲೋಕನ ಮತ್ತು ಅಂಥ ಕೊರತೆಯನ್ನು ಕಡಿಮೆ ಮಾಡಲು ಕಾರ್ಯಕ್ರಮದ;

(ಎಫ್) ಮುಂಬರುವ ವರ್ಷಕ್ಕಾಗಿ ಸಮಿತಿಯು ತಯಾರಿಸಿದ ಸಂಘದ ಚಟುವಟಿಕೆಗಳ ಕಾರ್ಯಕ್ರಮದ ಅನುಮೋದನೆಯ;

(ಜಿ) ವಾರ್ಷಿಕ ಬಜೆಟ್‌ನ ಅನುಮೋದನೆಯ;

(ಎಚ್) ನಿರ್ದಿಷ್ಟ ಮೀಸಲು ಮತ್ತು ಇತರ ನಿಧಿಗಳ ಸೃಜನೆಯ;

(ಐ) ಇತರ ಸಹಕಾರ ಸಂಘಗಳಲ್ಲಿ ಸಹಕಾರ ಸಂಘದ ಸದಸ್ಯತ್ವದ ಅನುಮೋದನೆಯ;

(ಜೆ) ಯಾವುದೇ ಪೂರಕ ಸಂಘದ ವಾರ್ಷಿಕ ವರದಿ ಮತ್ತು ಲೆಕ್ಕಪತ್ರಗಳು ಯಾವುದಾದರೂ ಇದ್ದರೆ ಅವುಗಳ ಪುನರವಲೋಕನದ;

(ಕೆ) ಸಮಿತಿಯ ಸದಸ್ಯರ ಅಥವಾ ಮುಖ್ಯ ಕಾರ್ಯನಿರ್ವಾಹಕರ ಬಂಧುಗಳಾಗಿದ್ದು ನೇಮಕ ಹೊಂದಿದ ನೌಕರರ ಪಟ್ಟಿಯ ಪರಿಶೀಲನೆಯ;

(ಎಲ್) ಉಪ ವಿಧಿಗಳ ತಿದ್ದುಪಡಿಯ;

(ಎಮ್) ಸಹಕಾರಿ ಸಂಘದ ಸಮಿತಿಯ ಸದಸ್ಯರು, ಪದಾಧಿಕಾರಿಗಳು ಮತ್ತು ನೌಕರರಿಗಾಗಿ ವರ್ತನ ಸಂಹಿತೆಯ ರಚನೆಯ;

(ಎನ್) ಸದಸ್ಯರ ಪ್ರವೇಶ ಮತ್ತು ಅವರನ್ನು ತೆಗೆದುಹಾಕುವ ಮೇಲಿನ ಸೂಚನೆಯ; ಮತ್ತು

(ಒ) ಉಪವಿಧಿಗಳಿಗನುಸಾರವಾಗಿ ಮಂಡಿಸಬಹುದಾದ ಯಾವುದೇ ಇತರ ವಿಷಯದ ಪರಿಶೀಲನೆಯ

– ಉದ್ದೇಶಗಳಿಗಾಗಿ ಸದಸ್ಯರ ಮಹಾ ಸಭೆಯನ್ನು ಸೆಪ್ಟೆಂಬರ್ 30ನೇ ದಿನಾಂಕದೊಳಗೆ ವರ್ಷದಲ್ಲಿ ಒಮ್ಮೆ ನಡೆಸತಕ್ಕುದು:

ಪರಂತು, ರಿಜಿಸ್ಟ್ರಾರನು, ವಿಶೇಷ ಆದೇಶದ ಮೂಲಕ ಅಂಥ ಸಭೆ ನಡೆಸುವ ಅವಧಿಯನ್ನು ಆರು ತಿಂಗಳುಗಳನ್ನು ಮೀರದ ಅವಧಿಗೆ ವಿಸ್ತರಿಸಬಹುದು.

(2) (1)ನೇ ಉಪ-ಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ, ಮಹಾ ಸಭೆಯನ್ನು ಕರೆಯಲು ತಪ್ಪಿದರೆ, ರಿಜಿಸ್ಟ್ರಾರನು, ಆದೇಶದ ಮೂಲಕ,-

(ಎ) ಅಂಥ ಸಭೆಯನ್ನು ಕರೆಯುವುದು ಯಾರ ಕರ್ತವ್ಯವಾಗಿತ್ತೋ ಮತ್ತು ಯಾರು ಅಂಥ ಸಭೆಯನ್ನು ಕರೆಯಲು ಸೂಕ್ತ ಕಾರಣವಿಲ್ಲದೆ ತಪ್ಪಿರುವರೋ ಆ ಯಾರೇ ಪದಾಧಿಕಾರಿಯನ್ನು ಅಥವಾ ಸಮಿತಿಯ ಸದಸ್ಯನನ್ನು ಐದು ವರ್ಷಗಳಿಗೆ ಮೀರದ ಅವಧಿಯವರೆಗೆ, ಸಮಿತಿಯ ಪದಾಧಿಕಾರಿಯಾಗಿರಲು ಅಥವಾ ಸದಸ್ಯನಾಗಿರಲು ಅಥವಾ ಹಾಗೆ ಆಯ್ಕೆಯಾಗಲು ಅನರ್ಹನೆಂದು ಘೋಷಿಸಬಹುದು.

(ಬಿ) ಅಂಥ ಸಭೆಯನ್ನು ಕರೆಯುವುದು ಯಾರ ಕರ್ತವ್ಯವಾಗಿತ್ತೋ ಮತ್ತು ಯಾರು ಅಂಥ ಸಭೆಯನ್ನು ಕರೆಯಲು ಸೂಕ್ತ ಕಾರಣವಿಲ್ಲದೆ ತಪ್ಪಿರುವರೋ, ಸಂಘದ ಆ ನೌಕರನ ಸಂದರ್ಭದಲ್ಲಿ, ಅವನಿಗೆ ಒಂದು ಸಾವಿರ ರೂಪಾಯಿಗಳ ದಂಡ ವಿಧಿಸಬಹುದು ಮತ್ತು ಅಂಥ ನೌಕರನ ಮೇಲೆ ಶಿಸ್ತು ಕ್ರಮವನ್ನು ತೆಗೆದುಕೊಳ್ಳುವಂತೆಯೂ ಸಮಿತಿಗೆ ನಿರ್ದೇಶಿಸಬಹುದು ಮತ್ತು ಹಾಗೆ ವಿಧಿಸಲಾದ ದಂಡದ ಮೊತ್ತವು ಸಂದಾಯವಾಗದೆ ಉಳಿದ ಅದನ್ನು ಭೂ ಕಂದಾಯದ ಬಾಕಿಯಂತೆ ವಸೂಲು ಮಾಡತಕ್ಕುದು:

ಪರಂತು, ಯಾವ ವ್ಯಕ್ತಿಯ ವಿರುದ್ಧ ಆದೇಶ ಮಾಡಬೇಕಾಗಿದೆಯೋ ಅವನಿಗೆ ಅಹವಾಲು ಹೇಳಿಕೊಳ್ಳಲು ಸೂಕ್ತ ಅವಕಾಶವನ್ನು ಕೊಟ್ಟ ಹೊರತು, ಈ ಉಪ-ಪ್ರಕರಣದ ಮೇರೆಗೆ ಯಾವುದೇ ಆದೇಶವನ್ನು ಮಾಡತಕ್ಕದ್ದಲ್ಲ.

(3) (1)ನೇ ಉಪ ಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ ಮಹಾಸಭೆಯನ್ನು ಕರೆಯಲು ತಪ್ಪಿದಲ್ಲಿ, ರಿಜಿಸ್ಟ್ರಾರ್ ಅಥವಾ ಈ ಸಂಬಂಧದಲ್ಲಿ ಆತನಿಂದ ಅಧಿಕೃತನಾದ ಯಾವೊಬ್ಬ ಇತರ ವ್ಯಕ್ತಿಯು, (2)ನೇ ಉಪ ಪ್ರಕರಣದ ಉಪಬಂಧಗಳಿಗೆ ಬಾಧಕವಾಗದಂತೆ, (1)ನೇ ಉಪ ಪ್ರಕರಣದ ಉದ್ದೇಶಕ್ಕಾಗಿ ಮಹಾಸಭೆಯನ್ನು ಕರೆಯತಕ್ಕದ್ದು.

**XX** **XX** **XX**

**28. ವಿಶೇಷ ಮಹಾ ಸಭೆ.**- (1) ಸಹಕಾರ ಸಂಘದ ಸಮಿತಿಯು, ಯಾವುದೇ ಸಮಯದಲ್ಲಿ ವಿಶೇಷ ಮಹಾಸಭೆಯನ್ನು ಕರೆಯಬಹುದು ಮತ್ತು ಅಂಥ ಸಭೆಯನ್ನು ರಿಜಿಸ್ಟ್ರಾರನಿಂದ ಅಥವಾ ಒಂದು ನಿರ್ದಿಷ್ಟ ಕಾರ್ಯ ಕಲಾಪವನ್ನು ನಡೆಸಲು ಐವತ್ತು ಸದಸ್ಯರಿಂದ ಅಥವಾ ಒಟ್ಟು ಸದಸ್ಯರ ಸಂಖ್ಯೆಯ ಐದನೇ ಒಂದರಷ್ಟು, ಇದರಲ್ಲಿ ಯಾವುದು ಕಡಿಮೆಯೋ ಅಷ್ಟು ಸದಸ್ಯರಿಂದ ನಿಯಮಿಸಬಹುದಾದಷ್ಟು ಪ್ರಮಾಣದ ಸದಸ್ಯರಿಂದ ಲಿಖಿತ ಕೋರಿಕೆಯನ್ನು ಸ್ವೀಕರಿಸಿದ ತರುವಾಯ ಒಂದು ತಿಂಗಳೊಳಗೆ ಕರೆಯತಕ್ಕುದು.

**XX** **XX** **XX**

**28ಎ. ಸಹಕಾರ ಸಂಘಗಳ ವ್ಯವಸ್ಥಾಪನೆಯು ಸಮಿತಿಯಲ್ಲಿ ನಿಹಿತವಾಗಿರುವುದು.**- (1) ಯಾವೊಂದು ಸಹಕಾರ ಸಂಘದ ವ್ಯವಸ್ಥಾಪನೆಯು ಈ ಅಧಿನಿಯಮ, ನಿಯಮಗಳು ಮತ್ತು ಅಂಥ ಸಂಘದ ಉಪವಿಧಿಗಳಿಗೆ ಅನುಗುಣವಾಗಿ ರಚಿಸಲಾದ ಒಂದು ಸಮಿತಿಯಲ್ಲಿ ನಿಹಿತವಾಗಿರತಕ್ಕುದು. ಆ ಸಮಿತಿಯು ಈ ಅಧಿನಿಯಮ, ನಿಯಮಗಳು ಮತ್ತು ಉಪವಿಧಿಗಳ ಮೇರೆಗೆ ಅದಕ್ಕೆ ಪ್ರಧಾನ ಮಾಡಿದ ಅಧಿಕಾರಗಳನ್ನು ಚಲಾಯಿಸತಕ್ಕುದು, ಕರ್ತವ್ಯಗಳನ್ನು ನಿರ್ವಹಿಸತಕ್ಕುದು ಮತ್ತು ಪ್ರಕಾರ್ಯಗಳನ್ನು ನೆರವೇರಿಸತಕ್ಕುದು.

(2) ಸಹಕಾರ ಸಂಘದ ಸಮಿತಿಯು ಸರ್ಕಾರದಿಂದ ನಾಮನಿರ್ದೇಶಿತರಾದ ವ್ಯಕ್ತಿಗಳು ಮತ್ತು ಮುಖ್ಯ ಕಾರ್ಯನಿರ್ವಾಹಕರನ್ನು ಹೊರತುಪಡಿಸಿ ಒಂಭತ್ತಕ್ಕಿಂತ ಕಡಿಮೆ ಇಲ್ಲದ ಆದರೆ ಕೆಳಗೆ ನಿರ್ದಿಷ್ಟಪಡಿಸಿದಷ್ಟು ಸಂಖ್ಯೆಗಿಂತ ಹೆಚ್ಚಿಲ್ಲದ ಸದಸ್ಯರನ್ನು ಒಳಗೊಂಡಿರತಕ್ಕುದು, ಎಂದರೆ:-

(i) ಪ್ರಾಥಮಿಕ ಸಂಘದ ಮತ್ತು ಸೆಕೆಂಡರಿ ಸಂಘದ ಕಾರ್ಯಾಚರಣೆ ಪ್ರದೇಶ ವ್ಯಾಪ್ತಿಯು-

(ಎ) ತಾಲ್ಲೂಕಿನ ಒಂದು ಭಾಗಕ್ಕೆ ವ್ಯಾಪಿಸಿದ್ದರೆ, ಒಂಭತ್ತು ಸದಸ್ಯರು;

(ಬಿ) ಇಡೀ ತಾಲ್ಲೂಕಿಗೆ ವ್ಯಾಪಿಸಿದ್ದರೆ, ಹನ್ನೊಂದು ಸದಸ್ಯರು;

(ಸಿ) ತಾಲ್ಲೂಕನ್ನು ಮೀರಿದ ಆದರೆ ಜಿಲ್ಲೆಯನ್ನು ಮೀರದ ಪ್ರದೇಶಕ್ಕೆ ವ್ಯಾಪಿಸಿದ್ದರೆ ಹದಿಮೂರು ಸದಸ್ಯರು:

ಪರಂತು, ಒಂದು ಜಿಲ್ಲೆಯನ್ನು ಮೀರದ ಕಾರ್ಯಾಚರಣೆಯ ಪ್ರದೇಶವನ್ನು ಹೊಂದಿರುವ ನಗರ ಸಹಕಾರ ಬ್ಯಾಂಕಿನ ಸಂಬಂಧದಲ್ಲಿ, ಗರಿಷ್ಠ ಸಂಖ್ಯೆಯು ಹದಿನೈದು ಸದಸ್ಯರನ್ನು ಮೀರತಕ್ಕುದಲ್ಲ

(ಡಿ) ಜಿಲ್ಲೆಯನ್ನು ಮೀರಿ ವ್ಯಾಪಿಸಿದ್ದರೆ, ಹದಿನೆಂಟು ಸದಸ್ಯರು;

(ii) ಅಪೆಕ್ಸ್ ಸಂಘಗಳನ್ನು ಹೊರತುಪಡಿಸಿ ಸಂಯುಕ್ತ ಸಂಘವಾಗಿದ್ದಲ್ಲಿ, ಇಪ್ಪತ್ತೊಂದು ಸದಸ್ಯರು;

(iii) ಒಂದು ಅಪೆಕ್ಸ್ ಸಂಘವಾಗಿದ್ದಲ್ಲಿ, ಮೂವತ್ತೆರಡು ಸದಸ್ಯರು :

ಪರಂತು, ಸದಸ್ಯನು ಸಂಘದ ಸಮಿತಿಯಲ್ಲಿ ಒಂದಕ್ಕಿಂತ ಹೆಚ್ಚಿನ ಮತ ಕ್ಷೇತ್ರವನ್ನು ಪ್ರತಿನಿಧಿಸತಕ್ಕುದಲ್ಲ.

(3) ಪ್ರತಿ ಪ್ರಾಥಮಿಕ ಸಂಘದ ಸಮಿತಿಯಲ್ಲಿ:-

(i) ಒಂದು ಸ್ಥಾನವನ್ನು ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ವರ್ಗಗಳಿಗೆ ಸೇರಿದ ವ್ಯಕ್ತಿಗಳಿಂದ ಚುನಾವಣೆ ಮೂಲಕ ಭರ್ತಿ ಮಾಡುವುದಕ್ಕಾಗಿ;

(ii) ಒಂದು ಸ್ಥಾನವನ್ನು ಮಹಿಳೆಯರಿಂದ ಚುನಾವಣೆ ಮೂಲಕ ಭರ್ತಿ ಮಾಡುವುದಕ್ಕಾಗಿ

- ಮೀಸಲಿಡತಕ್ಕುದು:

ಪರಂತು, ಪರಿಶಿಷ್ಟ ಜಾತಿಗಳು, ಪರಿಶಿಷ್ಟ ವರ್ಗಗಳು ಮತ್ತು ಮಹಿಳೆಯರಿಗೆ ಸೇರಿದ ಯಾರೇ ಸದಸ್ಯರು ಇಲ್ಲದಿದ್ದ ಸಂಘದ ಸಂದರ್ಭದಲ್ಲಿ ಯಾವುದೇ ಅಂತಹ ಮೀಸಲಾತಿಯನ್ನು ಮಾಡುವುದು ಅಗತ್ಯವಿರತಕ್ಕುದಲ್ಲ.

(4) 29ಎ ಮತ್ತು 39ಎ ಪ್ರಕರಣದ ಉಪಬಂಧಗಳಿಗೊಳಪಟ್ಟು, ಸಮಿತಿಯ ಸದಸ್ಯರ ಅಧಿಕಾರದ ಅವಧಿಯು ಐದು ಸಹಕಾರ ವರ್ಷಗಳಾಗಿರತಕ್ಕುದು ಮತ್ತು ಸದರಿ ಅವಧಿಯು ಮುಕ್ತಾಯವಾದ ದಿನಾಂಕದಂದು ಸಮಿತಿಯ ಅಂಥ ಸದಸ್ಯರು ಪದವನ್ನು ತೆರವುಗೊಳಿಸಿದ್ದಾರೆಂದು ಭಾವಿಸತಕ್ಕುದು:

ಪರಂತು, ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ಅಧಿನಿಯಮ, 1997 ಪ್ರಾರಂಭವಾಗುವುದಕ್ಕೆ ಮೊದಲು, ಅಂಥ ಸಂಘದ ಉಪ-ವಿಧಿಗಳಿಗನುಸಾರವಾಗಿ ಯಾವುದೇ ಸಹಕಾರ ಸಂಘದ ಸಮಿತಿಗೆ ಈಗಾಗಲೇ ಚುನಾವಣೆ ನಡೆದಿದ್ದರೆ, ಅಂಥ ಸಹಕಾರ ಸಂಘದ ಸಮಿತಿಯ ಪದಾವಧಿಯು, ಅಂಥ ಚುನಾವಣೆ ನಡೆದ ಸಹಕಾರ ವರ್ಷವೂ ಸೇರಿದಂತೆ ಮೂರು ವರ್ಷಗಳಾಗಿರತಕ್ಕುದು.

**ವಿವರಣೆ.**- ಈ ಉಪ-ಪ್ರಕರಣದ ಉದ್ದೇಶಕ್ಕಾಗಿ, ಸಮಿತಿಯ ಚುನಾವಣೆಯನ್ನು ಸಹಕಾರ ವರ್ಷದ ಮಧ್ಯಭಾಗದಲ್ಲಿ ನಡೆಸಿದ್ದರೆ, ಸಮಿತಿಯ ಪದಾವಧಿಯನ್ನು ಲೆಕ್ಕ ಹಾಕುವ ಉದ್ದೇಶಕ್ಕಾಗಿ, ಸಹಕಾರ ವರ್ಷದ ಉಳಿದ ಭಾಗವನ್ನೂ ಒಂದು ವರ್ಷವೆಂದು ಭಾವಿಸತಕ್ಕುದು:

ಮತ್ತೂ ಪರಂತು, ನೋಂದಣಿಯ ನಂತರ ಸಂಘದ ಮೊದಲ ಮಹಾ ಸಭೆಯನ್ನು ಸಂಘದ ವ್ಯವಹರಣೆಗಳನ್ನು ನಿರ್ವಹಿಸುವುದಕ್ಕೆ ಮೊದಲ ಸಮಿತಿಯನ್ನು ಆಯ್ಕೆ ಮಾಡಲು ನೋಂದಣಿಯ ದಿನಾಂಕದಿಂದ ಒಂದು ತಿಂಗಳೊಳಗೆ ನಡೆಸತಕ್ಕುದು. ಮತ್ತು ಅಂಥ ಸಮಿತಿಯ ಪದಾವಧಿಯೂ ಸಹ ಐದು ಸಹಕಾರ ವರ್ಷಗಳಾಗಿರತಕ್ಕುದು.

ಅಲ್ಲದೆ ಪರಂತು, 14ನೇ ಪ್ರಕರಣದ ಅನುಸಾರವಾಗಿ ಒಂದುಗೂಡಿದ ಅಥವಾ ಮಾನ್ಯತೆ ಪಡೆದ ಅಥವಾ ವಿಭಾಗದ ನಂತರ ರಚನೆಯಾದ ಸಹಕಾರಿ ಸಂಘದ ಅಥವಾ ಸಂಘಗಳ ಮೊದಲ ಮಹಾಸಭೆಯನ್ನು ಸಹಕಾರಿ ಸಂಘದ ಅಥವಾ ಸಂಘಗಳ ವ್ಯವಹಾರವನ್ನು ನಿರ್ವಹಿಸಲು ಮೊದಲ ಸಮಿತಿಯನ್ನು ಆಯ್ಕೆ ಮಾಡಲು ನೋಂದಣಿಯ ದಿನಾಂಕದಿಂದ ಮೂರು ತಿಂಗಳ ಒಳಗೆ ನಡೆಸತಕ್ಕದ್ದು ಮತ್ತು ಅಂಥ ಸಮಿತಿಯ ಪದಾವಧಿಯು ಸಹ ಐದು ಸಹಕಾರ ವರ್ಷಗಳಾಗಿರತಕ್ಕದ್ದು.

***XX*** ***XX*** ***XX***

**8ಬಿ. ಸಮಿತಿಯು ಚುನಾವಣೆಗೆ ವ್ಯವಸ್ಥೆ ಮಾಡಬೇಕು.**- (1) ಸಮಿತಿಯು ಅಧಿನಿಯಮ, ನಿಯಮಗಳು, ಮತ್ತು ಉಪ ವಿಧಿಗಳಿಗನುಸಾರವಾಗಿ, ಮುಂದಿನ ಸಮಿತಿಯ ಸದಸ್ಯರ ಚುನಾವಣೆಗೆ ವ್ಯವಸ್ಥೆಯನ್ನು ಮಾಡತಕ್ಕುದು.

***XX*** ***XX*** ***XX***

**29. ನೆರವು ಪಡೆದ ಸಹಕಾರ ಸಂಘದ ಸಮಿತಿಯಲ್ಲಿ ಸರ್ಕಾರದ ನಾಮನಿರ್ದೇಶಿತರು.**-

(1) ರಾಜ್ಯ ಸರ್ಕಾರವು, ಯಾವುದೇ ಸಹಾಯಕ ಸಂಘದ ಸಮಿತಿಗೆ ಮೂರಕ್ಕಿಂತ ಹೆಚ್ಚಿಲ್ಲದ ವ್ಯಕ್ತಿಗಳನ್ನು ತನ್ನ ಪ್ರತಿನಿಧಿಗಳೆಂದು ನಾಮ ನಿರ್ದೇಶಿಸಬಹುದು. ಅದರಲ್ಲಿ ಒಬ್ಬರು ಪರಿಶಿಷ್ಟ ಜಾತಿಗಳು ಅಥವಾ ಪರಿಶಿಷ್ಟ ಪಂಗಡಗಳಿಗೆ ಸೇರಿದ ವ್ಯಕ್ತಿಯಾಗಿರತಕ್ಕುದು ಮತ್ತು ಒಬ್ಬರು ಮಹಿಳೆಯಾಗಿರತಕ್ಕುದು.

(2) ಹಾಗೆ ನಾಮನಿರ್ದೇಶಿತರಾದ ವ್ಯಕ್ತಿಗಳು, ರಾಜ್ಯ ಸರ್ಕಾರವು ಕಾಲಕಾಲಕ್ಕೆ ಗೊತ್ತುಪಡಿಸಬಹುದಾದಂತೆ ಪ್ರಾಥಮಿಕ ಸಹಕಾರ ಸಂಘಗಳು ಮತ್ತು ಸಹಕಾರ ಸಂಘಗಳ ಇತರ ಯಾವುದೇ ವರ್ಗ ಅಥವಾ ವರ್ಗಗಳ ಪದಾಧಿಕಾರಿಗಳಾಗುವುದಕ್ಕೆ ಹಕ್ಕನ್ನು ಹೊಂದಿರತಕ್ಕುದಲ್ಲ.

(3) (1)ನೇ ಉಪ ಪ್ರಕರಣದ ಮೇರೆಗೆ ಒಂದು ಸಹಕಾರ ಸಂಘದ ಸದಸ್ಯನಾಗಿ ನಾಮನಿರ್ದೇಶಿತನಾದ ವ್ಯಕ್ತಿಯು ರಾಜ್ಯಸರ್ಕಾರದ ಇಷ್ಟಪರ್ಯಂತ ಅಂಥ ಸದಸ್ಯನಾಗಿ ಪದಧಾರಣ ಮಾಡತಕ್ಕುದು.

(4) (1)ನೇ ಉಪ-ಪ್ರಕರಣದ ಮೇರೆಗೆ ಸರ್ಕಾರದ ಅಧಿಕಾರಿಯನ್ನು ನಾಮ ನಿರ್ದೇಶನ ಮಾಡಿದಲ್ಲಿ ಅಂಥ ಅಧಿಕಾರಿಯು ಸಮಿತಿಯ ಯಾವುದೇ ಸಭೆಗೆ ತಾನು ಸ್ವತಃ ಹಾಜರಾಗಲು ಅಸಮರ್ಥನಾಗಿದ್ದರೆ ಅವನ ಪ್ರತಿನಿಧಿಯಾಗಿ ಸಭೆಗೆ ಹಾಜರಾಗಲು ಒಬ್ಬ ಅಧೀನ ಅಧಿಕಾರಿಯನ್ನು ಪ್ರತಿನಿಯೋಜಿಸಬಹುದು ಮತ್ತು ಅಂಥ ಅಧೀನ ಅಧಿಕಾರಿಯನ್ನು, ಅಂಥ ಸಭೆಯ ಉದ್ದೇಶಕ್ಕಾಗಿ, ರಾಜ್ಯ ಸರ್ಕಾರದ ಪ್ರತಿನಿಧಿಯಾಗಿ ನಾಮನಿರ್ದೇಶನಗೊಂಡ ಒಬ್ಬ ವ್ಯಕ್ತಿಯೆಂದು ಭಾವಿಸತಕ್ಕುದು.

(5)1ನೇ ಉಪಪ್ರಕರಣದ ಅಡಿಯಲ್ಲಿ ನಾಮನಿರ್ದೇಶಿತನಾದ ಸದಸ್ಯನು ಈ ಕರ್ತವ್ಯಗಳನ್ನು ನಿರ್ವಹಿಸತಕ್ಕದ್ದು, ಎಂದರೆ.–

1) ಸಮಿತಿಯ ಸಭೆಗಳಿಗೆ ಹಾಜರಾಗತಕ್ಕದ್ದು;

2) ಸರ್ಕಾರದ ಕಾರ್ಯನೀತಿಗಳನ್ನು ಜಾರಿಗೊಳಿಸಿರುವುದನ್ನು ಖಚಿತಪಡಿಸಿಕೊಳ್ಳುವುದು;

3) ಸಮಿತಿಯ ಸಭೆಗಳಲ್ಲಿ ಅಂಗೀಕರಿಸಬೇಕಾದ ನಿರ್ಣಯಗಳ ಸಂಬಂಧದಲ್ಲಿ ಅವು ಸಂಘದ ಅಥವಾ ಸಹಕಾರ ಚಳುವಳಿಯ ಹಿತಾಸಕ್ತಿಗಳಿಗೆ ಅನುಗುಣವಾಗಿಲ್ಲವೆಂದು ಅಥವಾ ಸಂಘದ ಅಥವಾ ಸಹಕಾರ ಚಳುವಳಿಯ ಹಿತಾಸಕ್ತಿಗೆ ಭಾದಕ ಉಂಟುಮಾಡುವ ಸಂಭವವಿದೆಯೆಂದು, ಅತ್ಯುತ್ತಮ ವಿವೇಚನಾನುಸಾರ ಅಭಿಪ್ರಾಯ ಪಡುವ ಈ ಎಲ್ಲ ವಿಷಯಗಳ ಬಗ್ಗೆ ತನ್ನ ಅಸಮ್ಮತಿಯನ್ನು ದಾಖಲಿಸತಕ್ಕದ್ದು;

4) ಸಮಿತಿಯ ಸಭೆಯು, ರಾಜ್ಯ ಸರ್ಕಾರದ ಅಥವಾ ರಿಜಿಸ್ಟ್ರಾರನ ಯಾವುದೇ ಆದೇಶವನ್ನು ಅಥವಾ ಈ ಅಧಿನಿಯಮ ಅಥವಾ ನಿಯಮಗಳ ಅಥವಾ ಸಂಘದ ಉಪವಿಧಿಗಳ ಯಾವುದೇ ಉಪಬಂಧಗಳನ್ನು ಉಲ್ಲಂಘಿಸುವ ನಿರ್ಣಯವನ್ನು ಅಂಗೀಕರಿಸಲು ಕೋರಿದಾಗ ತನ್ನ ಅಸಮ್ಮತಿಯನ್ನು ದಾಖಲಿಸತಕ್ಕದ್ದು

ಇಂಥ ನಿರ್ಣಯವನ್ನು ಬಹುಮತದಿಂದ ಅಂಗೀಕರಿಸಿದರೆ (ಸಿ) ಖಂಡದ ಅಥವಾ (ಡಿ) ಖಂಡದ ಅಡಿಯಲ್ಲಿ ಅಂಥ ನಿರ್ಣಯದ ಬಗ್ಗೆ ರಿಜಿಸ್ಟ್ರಾರ್‌ನಿಗೆ ಮತ್ತು ಸರ್ಕಾರಕ್ಕೆ ತಿಳಿಸತಕ್ಕದ್ದು.

***XX*** ***XX*** ***XX***

**29ಸಿ. ಸಮಿತಿಯ ಸದಸ್ಯತ್ವಕ್ಕೆ ಅನರ್ಹತೆಗಳು.**– (1) ಯಾರೇ ವ್ಯಕ್ತಿಯು ಯಾವುದೇ ಸಹಕಾರ ಸಂಘದ ಸಮಿತಿಯ ಸದಸ್ಯನಾಗಿ ಚುನಾಯಿತನಾಗಲು, ಅಥವಾ ನೇಮಕಗೊಳ್ಳಲು ಅಥವಾ ಮುಂದುವರಿಯಲು,–

(ಎ) ಋಣಿಯಾಗಿ ತನ್ನಿಂದ ಸಲ್ಲಬೇಕಾದ ಯಾವುದೇ ಬಾಕಿಗಳ ಸಂಬಂಧದಲ್ಲಿ ಅವನು ಆ ಸಂಘ ಅಥವಾ ಇತರ ಯಾವುದೇ ಸಹಕಾರ ಸಂಘಕ್ಕೆ ಸುಸ್ತಿದಾರನಾಗಿದ್ದರೆ;

(ಬಿ) ಅಂಥ ಸಹಕಾರ ಸಂಘದೊಂದಿಗೆ ಮಾಡಿಕೊಂಡ ಯಾವುದೇ ಕರಾರಿನಲ್ಲಿ ಅಥವಾ ಅಂಥ ಸಹಕಾರ ಸಂಘವು ಖಾಸಗಿಯಾಗಿ ಅಥವಾ ಹರಾಜಿನಲ್ಲಿ ಮಾಡಿದ ಮಾರಾಟ ಅಥವಾ ಖರೀದಿಯಲ್ಲಿ ಅಥವಾ ಆ ಕರಾರು, ಮಾರಾಟ, ಖರೀದಿ ಅಥವಾ ವಹಿವಾಟಿನಲ್ಲಿ (ಬಂಡವಾಳ ಹೂಡಿಕೆ ಮತ್ತು ಸಾಲ ಪಡೆಯುವುದನ್ನು ಬಿಟ್ಟು) ಹಣಕಾಸಿನ ಹಿತಾಸಕ್ತಿಗಳನ್ನು ಒಳಗೊಂಡ ಸಹಕಾರ ಸಂಘದ ಯಾವುದೇ ಕರಾರಿನಲ್ಲಿ ಅಥವಾ ವಹಿವಾಟಿನಲ್ಲಿ ಅವನು ನೇರವಾಗಿ ಅಥವಾ ಪರೋಕ್ಷವಾಗಿ ಹಿತಾಸಕ್ತಿ ಹೊಂದಿದ್ದರೆ;

(ಸಿ) ಅಂಥ ಸಹಕಾರ ಸಂಘವು ನಡೆಸುತ್ತಿರುವ ಅಥವಾ ಸಹಕಾರ ಸಂಘದ ಯಾವ ಸಹಕಾರ ಸಂಘವು ಸದಸ್ಯನಾಗಿರುವುದೋ ಆ ಸಹಕಾರ ಸಂಘವು ನಡೆಸುತ್ತಿರುವ ಅದೇ ಸ್ವರೂಪದ ವ್ಯವಹಾರವನ್ನು ಅವನು ಅಥವಾ ಅವನ ಹತ್ತಿರದ ಸಂಬಂಧಿಯು ನಡೆಸುತ್ತಿದ್ದರೆ:

ಪರಂತು, ಯಾರೇ ವ್ಯಕ್ತಿಯು, ಹತ್ತಿರದ ಸಂಬಂಧಿಯೇ ಅಥವಾ ಅಲ್ಲವೆ ಎಂಬ ಯಾವುದೇ ಪ್ರಶ್ನೆ ಉದ್ಭವಿಸಿದರೆ, ಆ ಪ್ರಕರಣವನ್ನು ರಿಜಿಸ್ಟ್ರಾರನು ತೀರ್ಮಾನಿಸತಕ್ಕುದು ಮತ್ತು ಅವನ ತೀರ್ಮಾನವೇ ಅಂತಿಮವಾಗಿರತಕ್ಕುದು;

(ಡಿ) ಅಂಥ ಸಹಕಾರ ಸಂಘದ ಪರವಾಗಿ ನ್ಯಾಯವಾದಿಯಾಗಿ ನೇಮಕಗೊಂಡರೆ ಅಥವಾ ಅಂಥ ಸಹಕಾರ ಸಂಘದ ವಿರುದ್ಧ ನ್ಯಾಯವಾದಿಯಾಗಿ ನಿಯೋಜನೆಯನ್ನು ಸ್ವೀಕರಿಸಿದರೆ;

(ಇ) ಅವನು ಅಂಥ ಸಹಕಾರ ಸಂಘದ ಅಥವಾ ಅದರ ಹಣಕಾಸು ಬ್ಯಾಂಕಿನ ವೇತನ ಪಡೆಯುವ ನೌಕರನಾಗಿದ್ದರೆ;

(ಎಫ್) ಅವನು ಅಂಥ ಸಹಕಾರ ಸಂಘದ ವೇತನ ಪಡೆಯುವ ನೌಕರನ ಹತ್ತಿರದ ಸಂಬಂಧಿಯಾಗಿದ್ದರೆ

– ಅರ್ಹನಾಗತಕ್ಕುದಲ್ಲ.

**ವಿವರಣೆ.**- ಈ ಖಂಡದ ಮತ್ತು (ಸಿ) ಖಂಡದ ಉದ್ದೇಶಕ್ಕಾಗಿ 'ಹತ್ತಿರದ ಸಂಬಂಧಿ' ಎಂದರೆ,-

(i) ಗಂಡ, ಹೆಂಡತಿ ಮತ್ತು ಅವಿವಾಹಿತ ಮಗಳು;

(ii) ತಂದೆ, ತಾಯಿ ಅವಿಭಕ್ತ ಮಗ, ಅವಿಭಕ್ತ ಸಹೋದರ ಮತ್ತು ಅವಿವಾಹಿತ ಸಹೋದರಿ; ಮತ್ತು

(iii) ಹತ್ತಿರದ ಸಂಬಂಧಿಗಳೆಂದು ನಿಯಮಿಸಬಹುದಾದಂಥ ಇತರ ಸಂಬಂಧಿಕರು.

(ಜಿ) ಅವನು ಸಹಕಾರ ಸಂಘದ ವೇತನ ಪಡೆಯುವ ನೌಕರನಾಗಿದ್ದು, ಅವನನ್ನು ಸಹಕಾರ ಸಂಘದ ಸೇವೆಯಿಂದ ವಜಾ ಮಾಡಲಾಗಿದ್ದರೆ, ತೆಗೆದುಹಾಕಲಾಗಿದ್ದರೆ ಅಥವಾ ಕಡ್ಡಾಯ ನಿವೃತ್ತಿಗೊಳಿಸಲಾಗಿದ್ದರೆ;

(ಹೆಚ್) ಅವನು ಸಂಘದ ಸದಸ್ಯನಾಗಿರುವುದರಿಂದ ಅಥವಾ ಅಂಥ ಸದಸ್ಯನಾಗಿ ಮತ ಚಲಾಯಿಸುವುದರಿಂದ ಅನರ್ಹನಾಗಿದ್ದರೆ;

(ಐ) ಅವನು 1960ರ ದಂಡ ಸಂಹಿತೆಯ (ಕೇಂದ್ರ ಅಧಿನಿಯಮ 1860ರ 45) 153ಎ ಪ್ರಕರಣ ಅಥವಾ 171ಇ ಪ್ರಕರಣ ಅಥವಾ 171ಎಫ್ ಪ್ರಕರಣ ಅಥವಾ 505ನೇ ಪ್ರಕರಣದ (2)ನೇ ಉಪ-ಪ್ರಕರಣದ ಅಥವಾ (3)ನೇ ಉಪ-ಪ್ರಕರಣದ ಮೇರೆಗೆ ಅಥವಾ ಈ ಅಧಿನಿಯಮದ 39ಜೆ ಪ್ರಕರಣದ ಅಥವಾ 39ಕೆ ಪ್ರಕರಣದ (2)ನೇ ಉಪ-ಪ್ರಕರಣದ (ಬಿ) ಖಂಡದ ಮೇರೆಗೆ ದಂಡನೀಯವಾದ ಒಂದು ಅಪರಾಧಕ್ಕಾಗಿ ಸಿದ್ಧದೋಷಿಯಾಗಿದ್ದರೆ ಹಾಗೆ ದೋಷ ಸಿದ್ಧಿಯಾದ ದಿನಾಂಕದಿಂದ ಆರು ವರ್ಷಗಳ ಅವಧಿ ಕಳೆದ ಹೊರತು;

(ಜೆ) ಅವನು, ಭಾರತದ ನ್ಯಾಯಾಲಯದಿಂದ ಯಾವುದೇ ಅಪರಾಧಕ್ಕಾಗಿ ಸಿದ್ಧದೋಷಿಯಾಗಿದ್ದು ಎರಡು ವರ್ಷಗಳಿಗಿಂತ ಕಡಿಮೆಯಿಲ್ಲದ ಅವಧಿಗೆ ಕಾರಾವಾಸ ಶಿಕ್ಷೆಗೆ, ಒಳಗಾಗಿದ್ದರೆ, ಅವನ ಬಿಡುಗಡೆಯ ದಿನಾಂಕದಿಂದ ಐದು ವರ್ಷಗಳ ಅವಧಿ ಕಳೆದ ಹೊರತು;

(ಕೆ) ಅವನು 39 ಸಿ ಪ್ರಕರಣದ ಅರ್ಥವ್ಯಾಪ್ತಿಯೊಳಗೆ ಭ್ರಷ್ಟಾಚಾರದ ದೋಷಿಯಾಗಿದ್ದರೆ, ಆ ಅಪರಾಧದ ದೋಷಿಯಾದ ದಿನಾಂಕದಿಂದ ಆರು ವರ್ಷಗಳ ಅವಧಿ ಕಳೆದ ಹೊರತು;

(ಎಲ್) ಅವನು ಈ ಅಧಿನಿಯಮದ ಉಪಬಂಧಗಳು, ನಿಯಮಗಳು ಅಥವಾ ಉಪ-ವಿಧಿಗಳನ್ನು ಉಲ್ಲಂಘಿಸಿ ಯಾವುದೇ ಸಹಕಾರ ಸಂಘದ ಯಾವುದೇ ಮೊತ್ತವನ್ನು (ಸಾಲದ ಹೊರತು) ಅವನಲ್ಲೇ ಇಟ್ಟುಕೊಂಡಿದ್ದು ಜಮೆ ಮಾಡಲು ವಿಫಲನಾಗಿದ್ದರೆ;

(ಎಂ) ಅವನು ಒಂದು ಹಣಕಾಸು ನೀಡಿಕೆ ಬ್ಯಾಂಕಿಗೆ ಅಥವಾ ಅವನು ಪ್ರತಿನಿಧಿಸುವ ಸಹಕಾರ ಸಂಘದಿಂದ ಇರುವ ಬಾಕಿಗಳ ಸಂಬಂಧದಲ್ಲಿ ಯಾವುದೇ ಸಹಕಾರ ಸಂಘಕ್ಕೆ ಸತತವಾಗಿ ಒಂದು ವರ್ಷದವರೆಗೆ ಸುಸ್ತಿದಾರನಾಗಿದ್ದರೆ

- ಅರ್ಹನಾಗತಕ್ಕುದಲ್ಲ:

ಪರಂತು, ಸಮಿತಿಯ ಸದಸ್ಯನಾಗಿ ಮುಂದುವರಿಯಲು ಈ ಖಂಡದ ಮೇರೆಗಿನ ಅನರ್ಹತೆಯು, ಅಂಥ ಬಾಕಿಗಳ ಶೇಕಡ ಮೂವತ್ತರಷ್ಟು ಮೊತ್ತವನ್ನು ಮೀರದಂತಹ ಮೊತ್ತವನ್ನು ಸಂದಾಯ ಮಾಡುವ ಸುಸ್ತಿದಾರ ಸಹಕಾರ ಸಂಘಕ್ಕೆ ಅನ್ವಯವಾಗತಕ್ಕುದು;

(ಎನ್) ಅವನು 39ಎ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಕಾಲಮಿತಿಯೊಳಗೆ ಚುನಾವಣೆಗೆ ವ್ಯವಸ್ಥೆ ಮಾಡುವಲ್ಲಿ ವಿಫಲನಾಗಿರುವ ಸಮಿತಿಯ ಸದಸ್ಯನಾಗಿದ್ದರೆ

- ಅರ್ಹನಾಗತಕ್ಕುದಲ್ಲ.

(ಒ) ಅವನು ಒಂದು ಸಹಕಾರ ಸಂಘದ ಪ್ರತಿನಿಧಿಯಾಗಿ ಒಂದು ಜಿಲ್ಲಾ ಕೇಂದ್ರ ಸಂಘದ ಅಥವಾ ಒಂದು ಒಕ್ಕೂಟ ಸಂಘದ ಅಥವಾ ಒಂದು ಅಪೆಕ್ಸ್ ಸಂಘದ ಸಮಿತಿಯ ಸದಸ್ಯನಾಗಿದ್ದರೆ; ಮತ್ತು,-

(i) ಅವನು ಪ್ರತಿನಿಧಿಸುವ ಪ್ರಾಥಮಿಕ ಅಥವಾ ಸೆಕೆಂಡರಿ ಸಂಘದ ಸದಸ್ಯತ್ವವು ಸಮಾಪ್ತಿಗೊಂಡರೆ; ಅಥವಾ

(ii) ಆತನನ್ನು ಪ್ರತಿನಿಧಿಯಾಗಿ ನಾಮನಿರ್ದೇಶನ ಮಾಡಿದ ಸಂಘವು ಆತನ ನಾಮನಿರ್ದೇಶನವನ್ನು ಹಿಂತೆಗೆದುಕೊಂಡರೆ; ಅಥವಾ

(iii) ಆತನು ಸದಸ್ಯನಾಗಿರುವ ಸಂಘದ ಸಮಿತಿಯನ್ನು 30ನೇ ಪ್ರಕರಣದ ಅಡಿಯಲ್ಲಿ ರದ್ದುಗೊಳಿಸಿದರೆ ಅಥವಾ 31ನೇ ಪ್ರಕರಣದ ಅಡಿಯಲ್ಲಿ ವಿಶೇಷಾಧಿಕಾರಿಯನ್ನು ನೇಮಕಗೊಳಿಸಿದರೆ;

(iv) ಆತನು ಪ್ರತಿನಿಧಿಸುತ್ತಿರುವ ಸಂಘವು ಸಮಾಪನಗೊಂಡರೆ.]

(2) ಯಾವೊಂದು ಸಹಕಾರ ಸಂಘವು ಸದಸ್ಯನಾಗಿರುವ ಇತರ ಸಹಕಾರ ಸಂಘದ ಸಮಿತಿಯ ಸದಸ್ಯನಾಗಿ ಚುನಾಯಿತನಾಗಿರುವ ವ್ಯಕ್ತಿಯೂ ಸೇರಿ, ಯಾರೇ ವ್ಯಕ್ತಿಯು ಎರಡು ಸಹಕಾರ ಸಂಘಗಳಿಗಿಂತ ಹೆಚ್ಚು ಸಹಕಾರ ಸಂಘಗಳಿಗೆ ಅಧ್ಯಕ್ಷ ಅಥವಾ ಸಭಾಧ್ಯಕ್ಷ, ಉಪಾಧ್ಯಕ್ಷ ಅಥವಾ ಉಪಸಭಾಧ್ಯಕ್ಷ ಅಥವಾ ಇತರ ಪದಾಧಿಕಾರಿ ಆಗಿರತಕ್ಕುದಲ್ಲ.

***XX*** ***XX*** ***XX***

(9) (8)ನೇ ಉಪ-ಪ್ರಕರಣದ ಮೇರೆಗೆ ಮಾಡಿದ ಆದೇಶದ ಒಂದು ಪ್ರತಿಯನ್ನು ಸಂಬಂಧಪಟ್ಟ ಸದಸ್ಯನಿಗೆ ಮತ್ತು ಸಹಕಾರ ಸಂಘಕ್ಕೆ ಕಳುಹಿಸತಕ್ಕುದು.

***XX*** ***XX*** ***XX***

**29ಇ. ಸಮಿತಿಯ ಸದಸ್ಯರ ಪದದಲ್ಲಿ ಉಂಟಾಗುವ ಆಕಸ್ಮಿಕ ಖಾಲಿ ಸ್ಥಾನವನ್ನು ಭರ್ತಿಮಾಡುವುದು.**- ಸಹಕಾರ ಸಂಘದ ಸಮಿತಿಯ ಸದಸ್ಯರ ಪದದಲ್ಲಿ ಮರಣ, ರಾಜೀನಾಮೆ, ವಜಾಮಾಡುವಿಕೆ ಅಥವಾ ಇತರ ಕಾರಣದಿಂದ ಉಂಟಾಗುವ ಯಾವುದೇ ಖಾಲಿ ಸ್ಥಾನವನ್ನು ಅಂಥ ಸಂಘದ ಉಪ ವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಂಥ ರೀತಿಯಲ್ಲಿ ಭರ್ತಿ ಮಾಡತಕ್ಕದ್ದು.

***XX*** ***XX*** ***XX***

**29ಎಫ್. ಅಧ್ಯಕ್ಷ, ಸಭಾಧ್ಯಕ್ಷ, ಉಪಾಧ್ಯಕ್ಷ ಅಥವಾ ಉಪಸಭಾಧ್ಯಕ್ಷ ಮುಂತಾದವರ ಚುನಾವಣೆ.-**

**XX XX XX**

(4) ಮುಖ್ಯ ಕಾರ್ಯನಿರ್ವಾಹಕನು ಸಾಮಾನ್ಯ ಚುನಾವಣೆಯ ನಂತರ ಸಮಿತಿಯು ರಚನೆಯಾದ ಅಥವಾ ಹಾಗೆಂದು ಭಾವಿಸಲಾದ ದಿನಾಂಕದಿಂದ ಹದಿನೈದು ದಿನಗಳೊಳಗಾಗಿ ಮತ್ತು ಅಧ್ಯಕ್ಷ ಅಥವಾ ಚೇರ್ ಪರ್ಸನ್, ಉಪಾಧ್ಯಕ್ಷ ಅಥವಾ ವೈಸ್ ಚೇರಮನ್ ನ ಅಧಿಕಾರಾವಧಿಯು ಮುಗಿಯುವ ನಿಕಟ ಮೊದಲು ಅಧ್ಯಕ್ಷ ಅಥವಾ ಚೇರ್ ಪರ್ಸನ್, ಉಪಾಧ್ಯಕ್ಷ ಅಥವಾ ವೈಸ್‌ಚೇರ್‌ಪರ್ಸನ್, ಮತ್ತು ಸಹಕಾರ ಸಂಘದ ಉಪವಿಧಿಗಳ ಮೇರೆಗೆ ಚುನಾಯಿಸಬೇಕಾದಂಥ ಅಧ್ಯಕ್ಷ ಅಥವಾ ಚೇರ್ ಪರ್ಸನ್, ಉಪಾಧ್ಯಕ್ಷ ಅಥವಾ ವೈಸ್ ಚೇರ್ ಪರ್ಸನ್ ಮತ್ತು ಇತರ ಪದಾಧಿಕಾರಿಗಳನ್ನು ಚುನಾಯಿಸುವ ಉದ್ದೇಶಕ್ಕಾಗಿ ನಿಯಮಿತ ರೀತಿಯಲ್ಲಿ ಎಲ್ಲ ಸದಸ್ಯರ ಸಭೆಯನ್ನು ಕರೆಯತಕ್ಕುದು. ಅಧ್ಯಕ್ಷ ಅಥವಾ ಚೇರ್ ಪರ್ಸನ್, ಉಪಾಧ್ಯಕ್ಷ ಅಥವಾ ಚೇರ್‌ಮನ್ ಸ್ಥಾನಕ್ಕೆ ಅಭ್ಯರ್ಥಿಯಾಗಿರದ ಸದಸ್ಯನನ್ನು ಅಂತಹ ಸಭೆಯ ಅಧ್ಯಕ್ಷತೆ ವಹಿಸಲು ಆಯ್ಕೆ ಮಾಡತಕ್ಕುದು:

ಪರಂತು, ಸಹಕಾರ ಸಂಘದ ನೋಂದಣಿಯ ನಂತರ ನಡೆದ ಮೊದಲ ಮಹಾ ಸಭೆಯಲ್ಲಿ ಆಯ್ಕೆಯಾದ ಮೊದಲ ಸಮಿತಿಯ ಸದಸ್ಯರು ಅಧ್ಯಕ್ಷ ಅಥವಾ ಚೇರ್‌ಪರ್ಸನ್, ಉಪಾಧ್ಯಕ್ಷ ಅಥವಾ ವೈಸ್ ಚೇರ್‌ಪರ್ಸನ್ ಮತ್ತು ಇತರ ಪದಾಧಿಕಾರಿಗಳನ್ನು ನಿಯಮಿಸಬಹುದಾದಂಥ ರೀತಿಯಲ್ಲಿ ಚುನಾಯಿಸತಕ್ಕುದು.

**XX XX XX**

**29ಜಿ. ಮುಖ್ಯ ಕಾರ್ಯನಿರ್ವಾಹಕನ ನೇಮಕ.-**

(ಬಿ) ಸಂಘದ ಅಧಿಕೃತ ಮತ್ತು ಸಾಮಾನ್ಯ ವ್ಯವಹಾರಗಳನ್ನು ನಡೆಸತಕ್ಕುದು;

**XX XX XX**

**30. ಸಮಿತಿಯ ರದ್ದಿಯಾತಿ.**– (1) ರಿಜಿಸ್ಟ್ರಾರನು,-

1. 1984ರ ಅಧಿನಿಯಮ ಸಂಖ್ಯೆ 5ರ ಮೂಲಕ 9.1.1984 ರಿಂದ ಜಾರಿಗೆ ಬರುವಂತೆ ಪ್ರತಿಯೋಜಿಸಲಾಗಿದೆ.

(ಎ) ಸಹಕಾರ ಸಂಘದ ಸಮಿತಿಯು, ಈ ಅಧಿನಿಯಮ ಅಥವಾ ನಿಯಮಗಳು ಅಥವಾ ಉಪವಿಧಿಗಳ ಮೂಲಕ ಅದಕ್ಕೆ ವಿಧಿಸಿದ ಕರ್ತವ್ಯಗಳ ನಿರ್ವಹಣೆಯಲ್ಲಿ ಮತ್ತೆ ಮತ್ತೆ ತಪ್ಪು ಮಾಡುತ್ತಿದೆ ಅಥವಾ ಅವುಗಳನ್ನು ಉಪೇಕ್ಷಿಸುತ್ತಿದೆ ಅಥವಾ ಸಹಕಾರ ಸಂಘದ ಅಥವಾ ಅದರ ಸದಸ್ಯರ ಹಿತಾಸಕ್ತಿಗಳಿಗೆ ಬಾಧಕವಾಗುವ ಯಾವುದೇ ಕಾರ್ಯವನ್ನು ಎಸಗಿದೆ ಅಥವಾ ಅನ್ಯಥಾ ಸರಿಯಾಗಿ ಕಾರ್ಯನಿರ್ವಹಿಸುತ್ತಿಲ್ಲವೆಂದು;

(ಬಿ) ಸಹಕಾರ ಸಂಘವು, ಈ ಅಧಿನಿಯಮ, ನಿಯಮಗಳು ಅಥವಾ ಉಪವಿಧಿಗಳ ಉಪಬಂಧಗಳು ಅಥವಾ ರಾಜ್ಯ ಸರ್ಕಾರವು ಅಥವಾ ರಿಜಿಸ್ಟ್ರಾರನು 30ಬಿ ಪ್ರಕರಣದ ಮೇರೆಗೆ ಹೊರಡಿಸಿದ ನಿರ್ದೇಶನವನ್ನೂ ಒಳಗೊಂಡಂತೆ ಯಾವುದೇ ಆದೇಶ ಅಥವಾ ನಿರ್ದೇಶನಕ್ಕೆ ಅನುಸಾರವಾಗಿ ಕಾರ್ಯನಿರ್ವಹಿಸುತ್ತಿಲ್ಲ ವೆಂದು ಅಭಿಪ್ರಾಯಪಟ್ಟರೆ, ರಿಜಿಸ್ಟ್ರಾರನು, ಆ ಸಮಿತಿಗೆ ತನ್ನ ಆಕ್ಷೇಪಣೆಗಳು ಯಾವುದಾದರೂ ಇದ್ದರೆ ಅವುಗಳನ್ನು ತಿಳಿಸಲು ಅವಕಾಶ ನೀಡಿದ ತರುವಾಯ ಲಿಖಿತ ಆದೇಶದ ಮೂಲಕ ಸದರಿ ಸಮಿತಿಯನ್ನು ತೆಗೆದುಹಾಕಬಹುದು ಮತ್ತು ರಿಜಿಸ್ಟ್ರಾರನು ನಿರ್ದಿಷ್ಟಪಡಿಸಬಹುದಾದ ಆರು ತಿಂಗಳಿಗೆ ಮೀರದಂಥ ಅವಧಿಗಾಗಿ ಸಂಘದ ವ್ಯವಹಾರವನ್ನು ನಿರ್ವಹಿಸಲು ಒಬ್ಬ ಆಡಳಿತಗಾರನನ್ನು ನೇಮಿಸಬಹುದು. ರಿಜಿಸ್ಟ್ರಾರರು, ಬರಹದಲ್ಲಿ ಕಾರಣಗಳನ್ನು ದಾಖಲು ಮಾಡಿ ಅಂಥ ನೇಮಕಾತಿಯ ಅವಧಿಯನ್ನು ಒಮ್ಮೆಗೆ ಆರು ತಿಂಗಳುಗಳ ಮತ್ತಷ್ಟು ಅವಧಿಗೆ ವಿಸ್ತರಿಸಬಹುದು ಮತ್ತು ಯಾವುದೇ ಸಂದರ್ಭದಲ್ಲೂ ಅಂಥ ವಿಸ್ತರಣೆಯು ಸರಾಸರಿ ಒಂದು ವರ್ಷವನ್ನು ಮೀರತಕ್ಕುದಲ್ಲ.

(2) ಹಾಗೆ ನೇಮಕಗೊಂಡ ಆಡಳಿತಗಾರನು ರಿಜಿಸ್ಟ್ರಾರನ ನಿಯಂತ್ರಣಕ್ಕೆ ಮತ್ತು ಅವನು ಕಾಲಕಾಲಕ್ಕೆ ನೀಡಬಹುದಾದಂಥ ಸೂಚನೆಗಳಿಗೆ ಒಳಪಟ್ಟು, ಸಮಿತಿಯ ಅಥವಾ ಸಹಕಾರ ಸಂಘದ ಯಾರೇ ಪದಾಧಿಕಾರಿಯ ಎಲ್ಲ ಅಥವಾ ಯಾವುವೇ ಪ್ರಕಾರ್ಯಗಳನ್ನು ನಿರ್ವಹಿಸತಕ್ಕುದು ಮತ್ತು ಅವನು ಸಂಘದ ಹಿತಾಸಕ್ತಿಯಲ್ಲಿ ಅವಶ್ಯವೆಂದು ಪರಿಗಣಿಸಬಹುದಾದಂಥ ಕ್ರಮವನ್ನು ಕೈಗೊಳ್ಳತಕ್ಕುದು.

(3) ಆಡಳಿತಗಾರನು, ತನ್ನ ಪದಾವಧಿಯು ಮುಕ್ತಾಯವಾಗುವುದಕ್ಕೆ ಮುಂಚೆ, ಈ ಅಧಿನಿಯಮ, ನಿಯಮಗಳು ಮತ್ತು ಸಹಕಾರ ಸಂಘದ ಉಪವಿಧಿಗಳಿಗೆ ಅನುಸಾರವಾಗಿ ಚುನಾವಣೆಯನ್ನು ನಡೆಸಿದ ತರುವಾಯ ಹೊಸ ಸಮಿತಿಯನ್ನು ರಚಿಸಲು ವ್ಯವಸ್ಥೆ ಮಾಡತಕ್ಕುದು:

ಪರಂತು, ಅಂಥ ಚುನಾವಣೆಯಲ್ಲಿ (1)ನೇ ಉಪ ಪ್ರಕರಣದ ಮೇರೆಗೆ ತೆಗೆದು ಹಾಕಲಾದ ಯಾವೊಬ್ಬ ಸದಸ್ಯನು, ಈ ಅಧಿನಿಯಮ, ನಿಯಮ ಅಥವಾ ಉಪ ವಿಧಿಗಳಲ್ಲಿ ಏನೇ ಅಡಕವಾಗಿದ್ದಾಗ್ಯೂ, ಸದರಿ ಉಪಪ್ರಕರಣದ ಮೇರೆಗೆ ಸಮಿತಿಯ ರದ್ದಿಯಾತಿಯ ದಿನಾಂಕದಿಂದ ನಾಲ್ಕು ವರ್ಷಗಳ ಅವಧಿಗಾಗಿ ಸಮಿತಿಯ ಒಬ್ಬ ಸದಸ್ಯನಾಗಿ ಚುನಾಯಿತನಾಗಲು ಅರ್ಹನಾಗಿರತಕ್ಕುದಲ್ಲ.

(4) ಸಹಕಾರ ಸಂಘದ ಸಂಬಂಧದಲ್ಲಿ (1)ನೇ ಉಪಪ್ರಕರಣದ ಮೇರೆಗೆ ಯಾವುದೇ ಕ್ರಮವನ್ನು ಕೈಗೊಳ್ಳುವುದಕ್ಕೆ ಮುಂಚೆ, ರಿಜಿಸ್ಟ್ರಾರನು, ಅದು ಯಾವ ಹಣಕಾಸು ಬ್ಯಾಂಕುಗಳಿಗೆ ಋಣಿಯಾಗಿದೆಯೋ ಅವುಗಳೊಂದಿಗೆ ಸಮಾಲೋಚಿಸತಕ್ಕುದಲ್ಲ.

(5) ಈ ಅಧಿನಿಯಮದಲ್ಲಿ ಏನೇ ಇದ್ದರೂ ರಿಜಿಸ್ಟ್ರಾರನು, ಸಹಕಾರ ಬ್ಯಾಂಕಿನ ಸಂಬಂಧದಲ್ಲಿ, ಸಾರ್ವಜನಿಕ ಹಿತಾಸಕ್ತಿಯಲ್ಲಿ ಅಥವಾ ಸಹಕಾರ ಬ್ಯಾಂಕಿನ ವ್ಯವಹಾರವನ್ನು ಠೇವಣಿದಾರರ ಹಿತಾಸಕ್ತಿಗೆ ಬಾಧಕವಾಗದ ರೀತಿಯಲ್ಲಿ ನಡೆಸಲು ಅಥವಾ ಆ ಸಹಕಾರ ಬ್ಯಾಂಕಿನ ಸರಿಯಾದ ವ್ಯವಸ್ಥಾಪನೆಯನ್ನು ಸುನಿಶ್ಚಿತಗೊಳಿಸಲು ಆ ಸಹಕಾರ ಬ್ಯಾಂಕಿನ ಸಮಿತಿಯನ್ನು ತೆಗೆದುಹಾಕಬೇಕೆಂದು ಭಾರತದ ರಿಸರ್ವ್ ಬ್ಯಾಂಕು ಲಿಖಿತದಲ್ಲಿ ಅಗತ್ಯಪಡಿಸಿದರೆ ಲಿಖಿತ ಆದೇಶದ ಮೂಲಕ ಅದನ್ನು ಹಾಗೆ ತೆಗೆದುಹಾಕತಕ್ಕುದು ಮತ್ತು ಭಾರತೀಯ ರಿಸರ್ವ್ ಬ್ಯಾಂಕು ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದ ಅವಧಿಗಾಗಿ ಸಹಕಾರ ಬ್ಯಾಂಕಿನ ವ್ಯವಹಾರಗಳ ವ್ಯವಸ್ಥಾಪನೆಗೆ ಆಡಳಿತಗಾರನನ್ನು ನೇಮಿಸತಕ್ಕುದು.

**XX XX XX**

**34. ಕೆಲವು ಸಂದರ್ಭಗಳಲ್ಲಿ ಸಂಘದ ಕ್ಲೇಮನ್ನು ವೇತನದಿಂದ ಕಳೆದುಕೊಳ್ಳುವುದು.**- ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಏನೇ ಇದ್ದರೂ, ಸಹಕಾರ ಸಂಘದ ಸದಸ್ಯನು, ತನ್ನ ನಿಯೋಜಕನು ತನಗೆ ಸಂದಾಯ ಮಾಡಬೇಕಾದ ಸಂಬಳ ಅಥವಾ ಮಜೂರಿಯಿಂದ, ಒಪ್ಪಂದ ಪತ್ರದಲ್ಲಿ ನಿರ್ದಿಷ್ಟಪಡಿಸಬಹುದಾದ ಮೊಬಲಗನ್ನು ಕಳೆದುಕೊಳ್ಳಲು ಮತ್ತು ಹಾಗೆ ಕಳೆದುಕೊಂಡ ಮೊಬಲಗನ್ನು ಆ ಸದಸ್ಯನಿಂದ ಸಂಘಕ್ಕೆ ಸಲ್ಲಬೇಕಾದ ಯಾವುದೇ ಋಣ ಅಥವಾ ಇತರ ತಗಾದೆಯ ತೀರಿಕೆಯಲ್ಲಿ ಸಂಘಕ್ಕೆ ಸಂದಾಯಮಾಡಲು ಸಕ್ಷಮನಾಗಿರುತ್ತಾನೆಂದು ಸಂಘಕ್ಕೆ ಒಂದು ಒಪ್ಪಂದ ಪತ್ರವನ್ನು ಬರೆದುಕೊಡಬಹುದು.

**XX** **XX** **XX**

**39ಎ. ಚುನಾವಣೆಗಳನ್ನು ನಡೆಸುವುದು.**- (1) ಸಹಕಾರ ಸಂಘದ ನೋಂದಣಿಯ ನಂತರ ಅಥವಾ ಯಾವುದೇ ಆಕಸ್ಮಿಕ ಖಾಲಿ ಸ್ಥಾನ ಉಂಟಾದ ನಂತರ ಅದರ ಮೊದಲ ಸಮಿತಿಯ ಸದಸ್ಯರನ್ನು ಹೊರತುಪಡಿಸಿ, ಸಮಿತಿಯ ಸದಸ್ಯರ ಪ್ರತಿಯೊಂದು ಸಾಮಾನ್ಯ ಚುನಾವಣೆಯನ್ನು, ರಿಜಿಸ್ಟ್ರಾರನ ಮೇಲ್ವಿಚಾರಣೆ, ನಿರ್ದೇಶನ ಮತ್ತು ನಿಯಂತ್ರಣಕ್ಕೊಳಪಟ್ಟು ನಡೆಸತಕ್ಕುದು.

(2) ಸಮಿತಿಯ ಸದಸ್ಯರ ಪ್ರತಿಯೊಂದು ಸಾಮಾನ್ಯ ಚುನಾವಣೆಯನ್ನು ಸಮಿತಿಯ ಪದಾವಧಿಯ ಮುಕ್ತಾಯದ ದಿನಾಂಕದ ಮೊದಲು ಹದಿನೈದು ದಿನಗಳ ಒಳಗೆ ನಡೆಸತಕ್ಕುದು. ಅಂತಹ ಸಾಮಾನ್ಯ ಚುನಾವಣೆಯ ದಿನಾಂಕವನ್ನು ಸಮಿತಿಯು ಅಥವಾ ಸಮಿತಿಯು ಇಲ್ಲದಿದ್ದರೆ ಆಡಳಿತಾಧಿಕಾರಿಯು ಅಥವಾ ವಿಶೇಷಾಧಿಕಾರಿಯು ಗೊತ್ತುಪಡಿಸತಕ್ಕುದು.

(3) ಅಧಿನಿಯಮದ ಉಪಬಂಧಗಳಿಗೊಳಪಟ್ಟು, ಸಮಿತಿ ಸದಸ್ಯರ ಚುನಾವಣೆಯನ್ನು ನಿಯಮಿಸಬಹುದಾದಂಥ ನಿಯಮಗಳಿಗನುಸಾರವಾಗಿ ರಹಸ್ಯ ಮತದಾನದ ಮೂಲಕ ನಡೆಸತಕ್ಕುದು.

(4) ಅಭಾವ, ಬರ, ಪ್ರವಾಹ, ಅಗ್ನಿ ಅಥವಾ ಯಾವುದೇ ಇತರ ನೈಸರ್ಗಿಕ ವಿಕೋಪಗಳ ಕಾರಣಗಳಿಂದಾಗಿ ಅಥವಾ ಮಳೆಗಾಲದಿಂದಾಗಿ ಅಥವಾ ರಾಜ್ಯ ವಿಧಾನಸಭೆಯ ಅಥವಾ ವಿಧಾನ ಪರಿಷತ್ತಿನ ಅಥವಾ ಲೋಕಸಭೆಯ ಅಥವಾ ಸ್ಥಳೀಯ ಸಂಸ್ಥೆಯ ಯಾವುದೇ ಚುನಾವಣಾ ಕಾರ್ಯಕ್ರಮವು ಯಾವುದೇ ಸಂಘದ ಅಥವಾ ಸಂಘಗಳ ವರ್ಗದ ಚುನಾವಣಾ ಕಾರ್ಯಕ್ರಮಗಳು ಜೊತೆ ಜೊತೆಯಾಗಿ ನಡೆಯುವುದರಿಂದಾಗಿ ಅಥವಾ ಸಾರ್ವಜನಿಕ ಹಿತಾಸಕ್ತಿಯಿಂದಾಗಿ, ಚುನಾವಣೆಗಳು ಮುಂದೂಡಲ್ಪಟ್ಟರೆ, ರಾಜ್ಯ ಸರ್ಕಾರವು ಈ ಅಧಿನಿಯಮ ಅಥವಾ ನಿಯಮ ಅಥವಾ ಉಪವಿಧಿಗಳಲ್ಲಿ ಏನೇ ಒಳಗೊಂಡಿದ್ದರೂ ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ಒಮ್ಮೆಗೆ ಆರು ತಿಂಗಳುಗಳನ್ನು ಮೀರದ ಅವಧಿಗಾಗಿ ಸಂಘ ಅಥವಾ ಸಂಘಗಳ ವರ್ಗದ ಚುನಾವಣೆಯನ್ನು ಮುಂದೂಡಬಹುದು ಮತ್ತು ಯಾವುದೇ ಸಂದರ್ಭದಲ್ಲೂ ಅದು ಸರಾಸರಿ ಎರಡು ವರ್ಷಗಳನ್ನು ಮೀರಕೂಡದು.

**XX** **XX** **XX**

**53ಎ. ಕೆಲವೊಂದು ಸಂದರ್ಭಗಳಲ್ಲಿ ರಾಜ್ಯಸರ್ಕಾರವು ಸಮಿತಿಯ ಸದಸ್ಯರನ್ನು ನಾಮನಿರ್ದೇಶನ ಮಾಡುವುದು.**- (1) 29ನೇ ಪ್ರಕರಣದಲ್ಲಿ ಏನೇ ಇದ್ದರೂ, ರಾಜ್ಯ ಸರ್ಕಾರವು, ಸಹಕಾರ ಸಂಘದ ಷೇರು ಬಂಡವಾಳಕ್ಕೆ-

(i) ಒಟ್ಟು ಷೇರು ಬಂಡವಾಳದ ಶೇಕಡಾ ಐವತ್ತಕ್ಕೆ, ಅಥವಾ

(ii) ಐದು ಲಕ್ಷ ರೂಪಾಯಿಗಳಿಗೆ

- ಕಡಿಮೆ ಇಲ್ಲದಷ್ಟು ಷೇರು ಬಂಡವಾಳ ವಂತಿಗೆ ನೀಡಿದರೆ, ರಾಜ್ಯ ಸರ್ಕಾರವು, ಸಹಕಾರ ಸಂಘದ ಸಮಿತಿಯ ಸದಸ್ಯರ ಒಟ್ಟು ಸಂಖ್ಯೆಯ ಮೂರನೇ ಒಂದು ಭಾಗದಷ್ಟು ಸದಸ್ಯರನ್ನು ತನ್ನ ಪ್ರತಿನಿಧಿಗಳಾಗಿ ನಾಮ ನಿರ್ದೇಶನ ಮಾಡಲು ಅಧಿಕಾರ ಹೊಂದಿರತಕ್ಕುದು.

(2) (1)ನೇ ಉಪ ಪ್ರಕರಣದ ಅಡಿಯಲ್ಲಿ ಸಹಕಾರ ಸಂಘದ ಸಮಿತಿಯ ಒಬ್ಬ ಸದಸ್ಯನಾಗಿ ನಾಮನಿರ್ದೇಶಿತನಾದ ವ್ಯಕ್ತಿಯು (ಇಲ್ಲಿ ಇನ್ನು ಮುಂದೆ, ಈ ಪ್ರಕರಣದಲ್ಲಿ ನಾಮನಿರ್ದೇಶಿತ ಸದಸ್ಯನೆಂದು ಉಲ್ಲೇಖಿಸಲಾಗಿದೆ), ರಾಜ್ಯ ಸರ್ಕಾರದ ಇಷ್ಟ ಪರ್ಯಂತ ಅಂಥ ಸದಸ್ಯನಾಗಿ ಪದಧಾರಣ ಮಾಡತಕ್ಕುದು.

(3) (2)ನೇ ಉಪ ಪ್ರಕರಣದ ಉಪಬಂಧಗಳಿಗೆ ಒಳಪಟ್ಟು, ನಾಮನಿರ್ದೇಶಿತ ಸದಸ್ಯನು, ರಾಜ್ಯ ಸರ್ಕಾರವು ಆದೇಶದ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಅವಧಿಗೆ ಅಂಥ ಸದಸ್ಯನಾಗಿ ಪದಧಾರಣ ಮಾಡತಕ್ಕುದು.

(4) (1)ನೇ ಉಪಪ್ರಕರಣದ ಅಡಿಯಲ್ಲಿ ಸಮಿತಿಯ ಸದಸ್ಯನಾಗಿ ರಾಜ್ಯಸರ್ಕಾರದ ಒಬ್ಬ ಅಧಿಕಾರಿಯನ್ನು ನಾಮನಿರ್ದೇಶಿಸಿದಲ್ಲಿ ಅಂಥ ಅಧಿಕಾರಿಯನ್ನು ಅವನ ಪದದ ಬಲದಿಂದಾಗಿ ನಾಮನಿರ್ದೇಶಿಸಬಹುದು ಮತ್ತು ಅಂಥ ಯಾವುದೇ ನಾಮನಿರ್ದೇಶನವನ್ನು ಮಾಡಿದಾಗ, ಅಂಥ ಅಧಿಕಾರಿಯು ಸಮಿತಿಯ ಯಾವುದೇ ಸಭೆಗೆ ಖುದ್ದಾಗಿ ಹಾಜರಾಗಲು ಸಾಧ್ಯವಾಗದಿದ್ದಲ್ಲಿ, ತನ್ನ ಪ್ರತಿನಿಧಿಯಾಗಿ ಅಧೀನ ಅಧಿಕಾರಿಯನ್ನು ಸಭೆಗೆ ಪ್ರತಿನಿಯೋಜಿಸಬಹುದು ಮತ್ತು ಅಂಥ ಅಧೀನ ಅಧಿಕಾರಿಯನ್ನು ಅಂಥ ಸಭೆಯ ಉದ್ದೇಶಗಳಿಗಾಗಿ ರಾಜ್ಯಸರ್ಕಾರದ ಪ್ರತಿನಿಧಿಯಾಗಿರುವ ನಾಮನಿರ್ದೇಶಿತನಾದ ವ್ಯಕ್ತಿಯೆಂದು ಭಾವಿಸತಕ್ಕುದು.

(5) ಈ ಅಧಿನಿಯಮದಲ್ಲಿ ಏನೇ ಇದ್ದರೂ, ಈ ಅಧಿನಿಯಮದ ಅಡಿಯಲ್ಲಿ ಹಾಗೆ ನಾಮನಿರ್ದೇಶಿತನಾದ ವ್ಯಕ್ತಿಯು 29 ಎಫ್ ಪ್ರಕರಣದ ಅಡಿಯಲ್ಲಿ ಪದಾಧಿಕಾರಿಗಳ ಚುನಾವಣೆಯ ಉದ್ದೇಶಕ್ಕಾಗಿ ಕರೆಯುವ ಸಹಕಾರ ಸಂಘದ ಯಾವುದೇ ಸಭೆಯಲ್ಲಿ ಮತಚಲಾಯಿಸುವ ಹಕ್ಕನ್ನು ಹೊಂದಿರತಕ್ಕುದಲ್ಲ ಅಥವಾ ಸಂಘದ ಪದಾಧಿಕಾರಿಯಾಗುವ ಹಕ್ಕನ್ನು ಹೊಂದಿರತಕ್ಕುದಲ್ಲ.

**XX** **XX** **XX**

**56. ನಿಧಿಗಳನ್ನು ವಿಭಾಗಿಸದಿರುವುದು.**-

**XX** **XX** **XX**

ಮತ್ತೂ ಪರಂತು, ಯಾರೇ ಸದಸ್ಯನಿಗೆ ಸಮಿತಿಗಳ ಸಭೆಗಳಿಗೆ ಹಾಜರಾದ ಬಗ್ಗೆ ಅಥವಾ ಸದಸ್ಯನಾಗಿ ಇತರ ಯಾವುದೇ ಪ್ರಕಾರ್ಯಗಳನ್ನು ನಿರ್ವಹಿಸಿದ ಬಗ್ಗೆ ಆ ಉದ್ದೇಶಕ್ಕಾಗಿ ನಿಯಮಿಸಲಾದ ಗರಿಷ್ಠ ದರಕ್ಕಿಂತ ಹೆಚ್ಚಿನ ದರದಲ್ಲಿ ಪ್ರಯಾಣಭತ್ಯ, ದಿನಭತ್ಯ ಅಥವಾ ಅಂಥ ಇತರ ಭತ್ಯಗಳನ್ನು

ಅಥವಾ ಫೀಜುಗಳನ್ನು ಸಂದಾಯ ಮಾಡತಕ್ಕುದಲ್ಲ ಮತ್ತು ಸಹಕಾರ ಸಂಘಗಳ ವಿವಿಧ ವರ್ಗಗಳಿಗಾಗಿ ಅಥವಾ ವಿವಿಧ ಉದ್ದೇಶಗಳಿಗಾಗಿ ವಿವಿಧ ದರಗಳನ್ನು ನಿಯಮಿಸಬಹುದು.

**XX** **XX** **XX**

**58. ನಿಧಿಗಳ ಹೂಡಿಕೆ.**- ಸಹಕಾರ ಸಂಘವು ತನ್ನ ನಿಧಿಗಳನ್ನು -

(ಎ) ಸರ್ಕಾರಿ ಉಳಿತಾಯ ಖಾತೆಯಲ್ಲಿ; ಅಥವಾ

(ಬಿ) ಭಾರತ ನ್ಯಾಸಗಳ ಅಧಿನಿಯಮ, 1882ರ (1882ರ ಕೇಂದ್ರ ಅಧಿನಿಯಮ II) 20ನೇ ಪ್ರಕರಣದಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಭದ್ರತಾ ಪತ್ರಗಳಲ್ಲಿ; ಅಥವಾ

(ಸಿ) ಇತರ ಯಾವುದೇ ಸಹಕಾರ ಸಂಘದ ಷೇರುಗಳಲ್ಲಿ ಅಥವಾ ಭದ್ರತಾ ಪತ್ರಗಳಲ್ಲಿ;

ಅಥವಾ

(ಡಿ) ಯಾವುದೇ ಸಹಕಾರ ಬ್ಯಾಂಕಿನಲ್ಲಿ; ಅಥವಾ

(ಇ) ರಿಜಿಸ್ಟ್ರಾರನಿಂದ ಅನುಮೋದಿತವಾದ ಯಾವುದೇ ಷೆಡ್ಯೂಲ್ಡ್ ಬ್ಯಾಂಕ್‌ನಲ್ಲಿ:

ಪರಂತು, ಸಹಕಾರ ಬ್ಯಾಂಕು ಅದರ ನಿಯತ ವ್ಯವಹಾರದ ನಿರ್ವಹಣೆಗಾಗಿ ಯಾವುದೇ ಷೆಡ್ಯೂಲ್ಡ್ ಬ್ಯಾಂಕಿನಲ್ಲಿ ಚಾಲ್ತಿ ಖಾತೆಯನ್ನು ತೆರೆಯಲು ಅಂಥ ಯಾವ ಅನುಮೋದನೆಯ ಅಗತ್ಯ ಇರತಕ್ಕುದಲ್ಲ.

**XX** **XX** **XX**

**59. ಎರವಲುಗಳ ಮೇಲೆ ನಿರ್ಬಂಧಗಳು:**- (1) ಸಹಕಾರ ಸಂಘವು, ನಿಯಮಿಸಬಹುದಾದಷ್ಟರ ಅಥವಾ ಉಪವಿಧಿಗಳಲ್ಲಿ ನಿರ್ದಿಷ್ಟಪಡಿಸಬಹುದಾದಷ್ಟರ ಮಟ್ಟಿಗೆ ಮತ್ತು ಅಂಥ ಷರತ್ತುಗಳಿಗೊಳಪಟ್ಟು ಮಾತ್ರವೇ ಠೇವಣಿಗಳನ್ನು ಮತ್ತು ಸಾಲಗಳನ್ನು ಸ್ವೀಕರಿಸತಕ್ಕುದು.

(2) (1)ನೇ ಉಪಪ್ರಕರಣದಲ್ಲಿ ಏನೇ ಇದ್ದರೂ, ರಿಜಿಸ್ಟ್ರಾರನು ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ ನಿರ್ದಿಷ್ಟಪಡಿಸಬಹುದಾದಂಥ ಸಹಕಾರ ಸಂಘಗಳು ಅಥವಾ ಸಹಕಾರ ಸಂಘಗಳ ವರ್ಗವು ಅಂಥ ಆದೇಶದಲ್ಲಿ ನಿಯಮಿಸಬಹುದಾದಂಥ ಷರತ್ತುಗಳಿಗೆ ಒಳಪಟ್ಟು ಪತ್ತಿನ ಏಜೆನ್ಸಿಯಿಂದ ಸಾಲಪಡೆಯಲು ಅಧಿಕಾರವನ್ನು ಹೊಂದಿರತಕ್ಕುದು.

**XX** **XX** **XX**

**63. ಲೆಕ್ಕ ಪರಿಶೋಧನೆ.**- (1) ಸಹಕಾರ ಲೆಕ್ಕ ಪರಿಶೋಧನೆಯ ನಿರ್ದೇಶಕನು, ಪ್ರತಿಯೊಂದು ಸಹಕಾರ ಸಂಘದ ಲೆಕ್ಕಪತ್ರಗಳನ್ನು ಪ್ರತಿವರ್ಷ ಕಡೇಪಕ್ಷ ಒಂದು ಬಾರಿಯಾದರೂ ಪರಿಶೋಧನೆ ಮಾಡತಕ್ಕುದು ಅಥವಾ ಈ ಬಗ್ಗೆ ವಿಶೇಷ ಅಥವಾ ಸಾಮಾನ್ಯ ಲಿಖಿತ ಆದೇಶದ ಮೂಲಕ ಅವನು ಅಧಿಕೃತಗೊಳಿಸಿರುವ ವ್ಯಕ್ತಿಯಿಂದ ಲೆಕ್ಕಪರಿಶೋಧನೆ ಮಾಡಿಸತಕ್ಕುದು.

(2) (1)ನೇ ಉಪಪ್ರಕರಣದ ಮೇರೆಗಿನ ಲೆಕ್ಕ ಪರಿಶೋಧನೆಯು, ಅವಧಿಮೀರಿದ ಋಣಗಳು ಯಾವುದಾದರೂ ಇದ್ದರೆ, ಅವುಗಳ ಪರೀಕ್ಷೆ, ನಗದು ಶಿಲ್ಕಿನ ಮತ್ತು ಭದ್ರತಾ ಪತ್ರಗಳ ಪರಿಶೀಲನೆ, ಆಸ್ತಿಗಳ ಮತ್ತು ಹೊಣೆಗಳ ಮೌಲ್ಯ ನಿಗದಿ ಮತ್ತು ಸಂಘದ ಕಾರ್ಯನಿರ್ವಹಣೆಯ ಮತ್ತು ನಿಯಮಿಸಲಾದ ಇತರ ವಿವರಗಳ ಪರೀಕ್ಷೆ ಇವುಗಳನ್ನು ಒಳಗೊಂಡಿರತಕ್ಕುದು.

(3) ಸಹಕಾರ ಲೆಕ್ಕ ಪರಿಶೋಧನೆಯ ನಿರ್ದೇಶಕನು ಅಥವಾ ಅಧಿಕೃತಗೊಂಡ ವ್ಯಕ್ತಿಗೆ ಸಂಘಕ್ಕೆ ಸೇರಿದ ಮತ್ತು ಅದರ ಅಭಿರಕ್ಷೆಯಲ್ಲಿರುವ ಎಲ್ಲಾ ಪುಸ್ತಕಗಳನ್ನು, ಲೆಕ್ಕಪತ್ರಗಳನ್ನು, ದಸ್ತಾವೇಜುಗಳನ್ನು, ಕಾಗದಪತ್ರಗಳನ್ನು, ಭದ್ರತಾ ಪತ್ರಗಳನ್ನು, ನಗದು ಹಣವನ್ನು ಮತ್ತು ಇತರ ಸ್ವತ್ತುಗಳನ್ನು ಎಲ್ಲಾ ಕಾಲಗಳಲ್ಲಿ ಪರಿಶೀಲಿಸುವ ಅವಕಾಶವಿರತಕ್ಕುದು ಮತ್ತು ಅವನು ಅಂಥ ಯಾವುವೇ ಪುಸ್ತಕಗಳನ್ನು, ಲೆಕ್ಕಪತ್ರಗಳನ್ನು, ನಗದು ಹಣವನ್ನು ಅಥವಾ ಇತರ ಸ್ವತ್ತುಗಳನ್ನು ಸ್ವಾಧೀನದಲ್ಲಿ ಇಟ್ಟುಕೊಂಡಿರುವ ಅಥವಾ ಅವುಗಳ ಅಭಿರಕ್ಷೆಗೆ ಹೊಣೆಗಾರನಾಗಿರುವ ಯಾರೇ ವ್ಯಕ್ತಿಯನ್ನು ಸಂಘದ ಕೇಂದ್ರ ಕಾರ್ಯಸ್ಥಾನದ ಯಾವುದೇ ಸಾರ್ವಜನಿಕ ಕಚೇರಿಯಲ್ಲಿ ಅಥವಾ ಅದರ ಯಾವುದೇ ಶಾಖೆಯಲ್ಲಿ ಹಾಜರುಪಡಿಸುವಂತೆ ಸಮನು ಮಾಡಬಹುದು.

(4) ಸಂಘದ ಅಧಿಕಾರಿ ಅಥವಾ ನೌಕರನಾಗಿರುವ ಅಥವಾ ಯಾವುದೇ ಕಾಲದಲ್ಲಿ ಆಗಿದ್ದ ಪ್ರತಿಯೊಬ್ಬ ವ್ಯಕ್ತಿಯು, ಮತ್ತು ಸಂಘದ ಪ್ರತಿಯೊಬ್ಬ ಸದಸ್ಯನು ಮತ್ತು ಮಾಜಿ ಸದಸ್ಯನು, ಸಂಘದ ವ್ಯವಹಾರ ಮತ್ತು ಕಾರ್ಯನಿರ್ವಹಣೆಯ ಬಗ್ಗೆ ಸಹಕಾರ ಲೆಕ್ಕ ಪರಿಶೋಧನೆಯ ನಿರ್ದೇಶಕನು ಅಥವಾ ಅಧಿಕೃತಗೊಂಡ ವ್ಯಕ್ತಿಯು ಅಗತ್ಯಪಡಿಸುವಂಥ ಮಾಹಿತಿಯನ್ನು ಒದಗಿಸತಕ್ಕುದು.

(4ಎ) ಪ್ರತಿಯೊಂದು ಸಹಕಾರ ಸಂಘವು, ಪ್ರತಿಯೊಂದು ಸಹಕಾರ ವರ್ಷಕ್ಕಾಗಿ ಆ ವರ್ಷವು ಕೊನೆಗೊಳ್ಳುವ ಮುನ್ನ ಎರಡು ತಿಂಗಳೊಳಗೆ ಆ ವರ್ಷದ ಜಮೆಗಳು ಹಾಗೂ ವಿತರಣೆಗಳು, ಲಾಭ ಮತ್ತು ನಷ್ಟ ಇವುಗಳನ್ನು ತೋರಿಸುವ ತಃಖ್ತೆಯನ್ನು ಮತ್ತು ಆಯವ್ಯಯಪಟ್ಟಿ ಮತ್ತು ರಿಜಿಸ್ಟ್ರಾರನು ಅಥವಾ ಸಹಕಾರ ಲೆಕ್ಕ ಪರಿಶೋಧನೆಯ ನಿರ್ದೇಶಕನು ನಿರ್ದೇಶಿಸಬಹುದಾದಂಥ ಇತರ ವಿವರಪತ್ರಗಳನ್ನು ಮತ್ತು ವಿವರಪಟ್ಟಿಕೆಗಳನ್ನು ತಯಾರಿಸಿ ಒದಗಿಸತಕ್ಕುದು.

(5) ಸಹಕಾರ ಲೆಕ್ಕ ಪರಿಶೋಧನೆಯ ನಿರ್ದೇಶಕನು ಲೆಕ್ಕ ಪರಿಶೋಧನಾ ವರದಿಯ ಪ್ರತಿಗಳನ್ನು ಸಹಕಾರ ಸಂಘದ ರಿಜಿಸ್ಟ್ರಾರ್‌ಗೆ ಮತ್ತು ಹಣಕಾಸು ನೀಡಿಕೆ ಬ್ಯಾಂಕ್‌ಗೆ ಅಥವಾ ಸಾಲನೀಡಿಕೆ ಏಜೆನ್ಸಿಗೆ ಮತ್ತು ಆ ಸಂಘವು ಯಾವುದೇ ಇತರ ಸಹಕಾರ ಸಂಘದೊಡನೆ ಸಂಯೋಜಿತವಾಗಿದ್ದರೆ ಆ ಸಂಘಕ್ಕೆ ಕಳುಹಿಸತಕ್ಕುದು ಮತ್ತು ಲೆಕ್ಕಪರಿಶೋಧನೆಯ ಫಲಿತಾಂಶಗಳನ್ನು ತಿಳಿಸತಕ್ಕುದು.

(6) ಸಹಕಾರ ಲೆಕ್ಕಪರಿಶೋಧನಾ ನಿರ್ದೇಶಕನು ಅಥವಾ ಅವನಿಂದ ಅಧಿಕೃತನಾದ ಯಾರೇ ಅಧಿಕಾರಿಯು, ಸಹಕಾರ ಸಂಘದ ವಾರ್ಷಿಕ ಮಹಾಸಭೆಗೆ ಸಂಬಂಧಿಸಿದ ಎಲ್ಲ ನೋಟೀಸುಗಳನ್ನು ಮತ್ತು ಪ್ರತಿಯೊಂದು ಮಾಹಿತಿಯನ್ನು ಸ್ವೀಕರಿಸಲು ಮತ್ತು ಅಂತಹ ಸಭೆಗೆ ಹಾಜರಾಗಲು ಮತ್ತು ಲೆಕ್ಕಪರಿಶೋಧಕನಾಗಿ ತನಗೆ ಸಂಬಂಧಪಟ್ಟಿರುವ ಯಾವುದೇ ಕಾರ್ಯಕ್ಕೆ ಸಂಬಂಧಪಟ್ಟಂತೆ ಅಲ್ಲಿ ಅಹವಾಲು ಆಲಿಸಲು ಹಕ್ಕುಳ್ಳವನಾಗಿರತಕ್ಕುದು.

(7) (1)ನೇ ಉಪ-ಪ್ರಕರಣದ ಮೇರೆಗೆ ನಡೆಸಿದ ಲೆಕ್ಕಪರಿಶೋಧನೆಯ ಫಲಿತಾಂಶವು, ಸಂಘದ ಕಾರ್ಯನಿರ್ವಹಣೆಯಲ್ಲಿನ ಯಾವುದೇ ದೋಷಗಳನ್ನು ಬಹಿರಂಗಪಡಿಸಿದರೆ, ಸಂಘವು, ಲೆಕ್ಕ ಪರಿಶೋಧನೆಯ ದಿನಾಂಕದಿಂದ ಆರು ತಿಂಗಳ ಒಳಗಾಗಿ, ಲೆಕ್ಕ ಪರಿಶೋಧನೆಯಲ್ಲಿ ಎತ್ತಿತೋರಿಸಿದ ದೋಷಗಳನ್ನು ಅಥವಾ ಅಕ್ರಮಗಳನ್ನು ಸಹಕಾರ ಲೆಕ್ಕ ಪರಿಶೋಧನೆಯ ನಿರ್ದೇಶಕನಿಗೆ ಮತ್ತು ರಿಜಿಸ್ಟ್ರಾರನಿಗೆ ವಿವರಿಸತಕ್ಕುದು ಮತ್ತು ದೋಷಗಳನ್ನು ಸರಿಪಡಿಸಲು ಮತ್ತು ಅಕ್ರಮಗಳನ್ನು ಸರಿಪಡಿಸಲು ಕ್ರಮ ಕೈಗೊಳ್ಳತಕ್ಕುದು. ನಂತರ, ಸಂಘವು ತೆಗೆದುಕೊಂಡ ಕ್ರಮದ ಬಗ್ಗೆ ರಿಜಿಸ್ಟ್ರಾರನಿಗೆ ವರದಿ ಮಾಡತಕ್ಕುದು. ರಿಜಿಸ್ಟ್ರಾರನು ಸಂಘ ಅಥವಾ ಅದರ ಪದಾಧಿಕಾರಿಗಳಿಗೆ ದೋಷಗಳನ್ನು ಸರಿಪಡಿಸಲು ಆದೇಶದಲ್ಲಿ ನಿರ್ದಿಷ್ಟಪಡಿಸಿರಬಹುದಾದ ಕ್ರಮವನ್ನು ಅದರಲ್ಲಿ ನಿರ್ದಿಷ್ಟಪಡಿಸಿರುವ ಅವಧಿಯೊಳಗೆ ಕೈಗೊಳ್ಳುವಂತೆ ನಿರ್ದೇಶಿಸಿ, ಒಂದು ಆದೇಶವನ್ನೂ ಸಹ ಹೊರಡಿಸಬಹುದು.

(8) (ಎ) ಲೆಕ್ಕ ಪರಿಶೋಧನಾ ವರದಿಯಲ್ಲಿ ಆಕ್ಷೇಪಣೆಗೆ ಒಳಪಟ್ಟಿರುವ ಯಾವುದೇ ಬಾಬಿನ ಬಗ್ಗೆ ಅಹವಾಲುಳ್ಳ ಯಾವುದೇ ಸಂಘವು, ಲೆಕ್ಕಪರಿಶೋಧನಾ ವರದಿಯನ್ನು ಸ್ವೀಕರಿಸಿದ ದಿನದಿಂದ ಆರು ತಿಂಗಳ ಒಳಗಾಗಿ ಸಹಕಾರ ಲೆಕ್ಕ ಪರಿಶೋಧನಾ ನಿರ್ದೇಶಕರಿಗೆ ಅದನ್ನು ಬಿಟ್ಟುಬಿಡುವಂತೆ ಅರ್ಜಿ ಸಲ್ಲಿಸಬಹುದು;

(ಬಿ) ಸಹಕಾರ ಲೆಕ್ಕ ಪರಿಶೋಧನಾ ನಿರ್ದೇಶಕರು, (ಎ) ಖಂಡದ ಮೇರೆಗೆ ಅರ್ಜಿ ಸ್ವೀಕರಿಸಿದ ನಂತರ, ಆಕ್ಷೇಪಣೆಗೆ ಸಂಬಂಧಿಸಿದ ದಸ್ತಾವೇಜುಗಳು ಯಾವುವಾದರೂ ಇದ್ದರೆ, ಅವುಗಳನ್ನು ಹಾಜರುಪಡಿಸುವಂತೆ ತಿಳಿಸಬಹುದು ಮತ್ತು ಅವುಗಳನ್ನು ಪರಿಶೀಲಿಸಬಹುದು. ಅವನು ಲೆಕ್ಕಪರಿಶೋಧಕನೂ ಸೇರಿದಂತೆ ಯಾರೇ ವ್ಯಕ್ತಿಯನ್ನು ವಿಚಾರಿಸಬಹುದು ಮತ್ತು ಲೆಕ್ಕ ಪರಿಶೋಧನಾ ಆಕ್ಷೇಪಣೆಯನ್ನು ಬಿಟ್ಟು ಬಿಡುವುದಕ್ಕೆ ಅಥವಾ ಅದರ ಸ್ಥಿರೀಕರಣಕ್ಕೆ ಆದೇಶಿಸಬಹುದು ಹಾಗೂ, ಬಿಟ್ಟುಬಿಟ್ಟರೆ ಆಕ್ಷೇಪಣೆಯನ್ನು ಸಂಘದ ಬ್ಯಾಲೆನ್ಸ್ ಶೀಟಿನಿಂದ ತೆಗೆದುಹಾಕಲಾಗಿದೆಯೆಂದಾಗತಕ್ಕುದು ಮತ್ತು ಸ್ಥಿರೀಕರಿಸಿದರೆ ಆಕ್ಷೇಪಣೆಗೆ ಒಳಪಟ್ಟಿದ್ದ ಮೊಬಲಗನ್ನು ವಸೂಲಿ ಮಾಡಬಹುದು.

(9) ರಿಜಿಸ್ಟ್ರಾರನು, ಲೆಕ್ಕ ಪರಿಶೋಧನೆಯಲ್ಲಿ ಕಂಡುಬಂದ ದೋಷಗಳ ಸಂಖ್ಯೆ, ಸರಿಪಡಿಸಿದ ದೋಷಗಳ ಸಂಖ್ಯೆ, ದೋಷಗಳನ್ನು ನಿವಾರಿಸಲು ತೆಗೆದುಕೊಂಡ ಕ್ರಮ ಮತ್ತು ಉಳಿಕೆ ಏನಾದರೂ ಇದ್ದರೆ ಅದಕ್ಕೆ ಕಾರಣಗಳನ್ನು ವಿವರಗಳನ್ನು ಒದಗಿಸಿ, ರಾಜ್ಯ ಸರ್ಕಾರಕ್ಕೆ ಅರ್ಧವಾರ್ಷಿಕ ವರದಿಗಳನ್ನು ಸಲ್ಲಿಸತಕ್ಕುದು. ಅಂತಹ ವರದಿಯ ಒಂದು ಪ್ರತಿಯನ್ನು ಸಹಕಾರ ಲೆಕ್ಕಪರಿಶೋಧನಾ ನಿರ್ದೇಶಕನಿಗೆ ಕಳುಹಿಸತಕ್ಕುದು.

(10) ಸಹಕಾರ ಸಂಘವು ಸಲ್ಲಿಸಿದ ಅರ್ಜಿಯ ಮೇಲೆ ಅಥವಾ ಅನ್ಯಥಾ ರಾಜ್ಯ ಸರ್ಕಾರಕ್ಕೆ, ಸಂಘದ ಯಾವುದೇ ಲೆಕ್ಕ ಪತ್ರವನ್ನು ಮರು ಲೆಕ್ಕಪರಿಶೋಧನೆ ಮಾಡುವುದು ಅವಶ್ಯಕ ಅಥವಾ ಯುಕ್ತವೆಂದು ಕಂಡುಬಂದರೆ, ರಾಜ್ಯ ಸರ್ಕಾರವು, ಆದೇಶದ ಮೂಲಕ ಅಂತಹ ಮರು ಲೆಕ್ಕ ಪರಿಶೋಧನೆಗೆ ವ್ಯವಸ್ಥೆ ಮಾಡಬಹುದು ಮತ್ತು ಲೆಕ್ಕ ಪರಿಶೋಧನೆಗೆ ಅನ್ವಯವಾಗುವ ಅಧಿನಿಯಮ ಮತ್ತು ನಿಯಮಗಳು, ಉಪಬಂಧಗಳು ಅಂಥ ಮರು ಲೆಕ್ಕಪರಿಶೋಧನೆಗೆ ಅನ್ವಯವಾಗತಕ್ಕುದು:

ಮತ್ತೂ ಪರಂತು, ನಿಯತ ಲೆಕ್ಕ ಪರಿಶೋಧನೆಯ ಸಮಯದಲ್ಲಿ ಲೆಕ್ಕ ಪರಿಶೋಧಕನು ಪತ್ತೆಹಚ್ಚಿರದ ಅಥವಾ ಸರಿಯಾಗಿ ಪರಿಶೀಲನೆ ಮಾಡಿಲ್ಲದ ಹಣದ ಬಗ್ಗೆ ಮೋಸ ಆಗಿದೆಯೆಂಬುದು ಅಥವಾ ದುರ್ವಿನಿಯೋಗ ವಾಗಿದೆಯೆಂಬುದು ಅಥವಾ ದುರುಪಯೋಗವಾಗಿದೆಯೆಂಬುದು ಮೇಲ್ನೋಟಕ್ಕೆ ಕಂಡುಬಂದರೆ ಅಥವಾ ಲೆಕ್ಕಪತ್ರಗಳ ತಪ್ಪು ವರ್ಗೀಕರಣ ಮಾಡಿದ್ದರೆ ಅಥವಾ ಸಂಘದ ಹಣಕಾಸು ಪರಿಸ್ಥಿತಿಯನ್ನು ಸತ್ಯವಾಗಿ ಪ್ರತಿಬಿಂಬಿಸುವ ದೃಷ್ಟಿಯಿಂದ ಯಾವುದೇ ಇತರ ಸಮಂಜಸ ಕಾರಣಗಳಿಗಾಗಿ ಅಂಥ ಮರುಲೆಕ್ಕ ಪರಿಶೋಧನೆಗೆ ಆದೇಶ ಮಾಡತಕ್ಕುದು.

(11) ಹಿಂದಿನ ಉಪ-ಪ್ರಕರಣಗಳಲ್ಲಿ ಏನೇ ಇದ್ದರೂ, ಸಹಕಾರ ಲೆಕ್ಕ ಪರಿಶೋಧನೆಯ ನಿರ್ದೇಶಕನು, ಯಾವುದೇ ಸಹಕಾರ ಸಂಘದ ಯಾವುದೇ ವರ್ಷಕ್ಕೆ ಸಂಬಂಧಪಟ್ಟ ಲೆಕ್ಕಪತ್ರಗಳನ್ನು ಮರುಪರಿಶೀಲನೆ ಮಾಡಲು ಅಥವಾ ಮರು ಸತ್ಯಾಪನೆ ಮಾಡಲು ಮತ್ತು ಅಂಥ ಮರುಪರೀಕ್ಷೆ ಅಥವಾ ಮರು ಸತ್ಯಾಪನೆಯ ಸಮಯದಲ್ಲಿ ಕಂಡುಬಂದ ಲೋಪಗಳನ್ನು, ಮುಂದಿನ ವರ್ಷ ಮಾಡಬೇಕಾದ ಲೆಕ್ಕಪರಿಶೋಧನಾ ವರದಿಯಲ್ಲಿ ಸೇರಿಸಿಕೊಳ್ಳಲು ಅಧಿಕಾರ ಹೊಂದಿರತಕ್ಕುದು.

2(12) (3) ನೇ ಉಪಪ್ರಕರಣದ ಉಪಬಂಧಗಳಿಗೆ ಬಾಧಕವಾಗದಂತೆ

ಪರಿಶೋಧಕನು:-

(ಎ) ಸಹಕಾರ ಸಂಘವು ಭದ್ರತೆಯ ಆಧಾರದ ಮೇಲೆ ನೀಡಿರುವ ಸಾಲಗಳ ಅಥವಾ ಮುಂಗಡಗಳನ್ನು ಸೂಕ್ತವಾಗಿ ಭದ್ರತೆ ಪಡೆದು ನೀಡಲಾಗಿದೆ. ಮತ್ತು ಯಾವ ನಿಬಂಧನೆಗಳ ಮೇಲೆ ಅವುಗಳನ್ನು ನೀಡಲಾಗಿದೆಯೋ ನಿಬಂಧನೆಗಳು ಸಹಕಾರ ಸಂಘದ ಅಥವಾ ಅದರ ಸದಸ್ಯರ ಹಿತಾಸಕ್ತಿ ಪ್ರತಿಕೂಲವಾಗಿಲ್ಲವೆಂಬ ಬಗ್ಗೆ;

(ಬಿ) ಕೇವಲ ಪುಸ್ತಕ ನಮೂದುಗಳನ್ನು ಪ್ರತಿನಿಧಿಸುವ ಸಹಕಾರ ಸಂಘದ ವ್ಯವಹಾರಗಳು ಸಹಕಾರ ಸಂಘದ ಹಿತಾಸಕ್ತಿಗಳಿಗೆ ಪ್ರತಿಕೂಲವಾಗಿಲ್ಲವೆಂಬ ಬಗ್ಗೆ;

(ಸಿ) ವೈಯಕ್ತಿಕ ವೆಚ್ಚಗಳನ್ನು ರಾಜಸ್ವ ಲೆಕ್ಕಕ್ಕೆ ಖರ್ಚು ಹಾಕಲಾಗಿದೆಯೇ;

(ಡಿ) ಯಾವುವೇ ಷೇರುಗಳನ್ನು ನಗದಿಗಾಗಿ ಹಂಚಿಕೆ ಮಾಡಲಾಗಿದೆ ಎಂದು

ಪುಸ್ತಕಗಳಲ್ಲಿ ಮತ್ತು ಕಾಗದಪತ್ರಗಳಲ್ಲಿ ನಿರೂಪಿಸಿರುವಲ್ಲಿ, ಅಂಥ ಹಂಚಿಕೆಗೆ ಸಂಬಂಧಪಟ್ಟಂತೆ ನಗದನ್ನು ವಾಸ್ತವಿಕವಾಗಿ ಸ್ವೀಕರಿಸಲಾಗಿದೆಯೇ ಮತ್ತು ಯಾವುದೇ ನಗದನ್ನು ವಾಸ್ತವಿಕವಾಗಿ ಹಾಗೇ ಸ್ವೀಕರಿಸಿಲ್ಲದಿದ್ದರೆ, ಲೆಕ್ಕಪುಸ್ತಕಗಳಲ್ಲಿ ಮತ್ತು ಜಮಾಖರ್ಚು ಪಟ್ಟಿಯಲ್ಲಿ ನಿರೂಪಿಸಲಾದ ಸ್ಥಿತಿಯು ಸರಿಯಾದುದೇ, ಕ್ರಮಬದ್ಧವಾದುದೇ ಮತ್ತು ದಾರಿ ತಪ್ಪಿಸುವಂಥದ್ದಲ್ಲವೇ ಎಂಬ ಬಗ್ಗೆ;

(ಇ) ವಿಚಾರಣೆ ಮಾಡುವ ಸಲುವಾಗಿ ರಿಜರ್ವ್ ಬ್ಯಾಂಕು ಅಥವಾ ರಾಷ್ಟ್ರೀಯ ಬ್ಯಾಂಕು ಉಲ್ಲೇಖಿಸಿದ ಯಾವುದೇ ವಿಶೇಷ ವಿವಾದಾಂಶ ಅಥವಾ ವಸ್ತುವಿಷಯದ ಬಗ್ಗೆ ವಿದ್ಯುಕ್ತವಾಗಿ ವಿಚಾರಣೆ ಮಾಡಲಾಗಿದೆಯೇ ಮತ್ತು ಆ ಬಗೆಗಿನ ವರದಿಯನ್ನು ರಿಜರ್ವ್ ಬ್ಯಾಂಕಿಗೆ ಅಥವಾ ಸಂಧರ್ಭಾನುಸಾರ, ರಾಷ್ಟ್ರೀಯ ಬ್ಯಾಂಕಿಗೆ ಸಲ್ಲಿಸಲಾಗಿದೆಯೇ ಎಂಬ ಬಗ್ಗೆ; ವಿಚಾರಣೆ ಮಾಡತಕ್ಕದ್ದು.

